# ನರಿಯ ಬಾಲ








ಸಂಖ್ಯೆ
೬

ಬಿ. ಬಿ. ಡಿ. ಪವರ್ ಪ್ರೆಸ್
ಬೆಂಗಳೂರು ನಗರ

ಬೆಲೆ
೧೦ ಆಣೆ

## ರತ್ನನ ಶಿಶುಸಾಹಿತ್ಯ

ತುತ್ತೂರಿ ಕಡಲೆಪುರಿ

ಚುಟಕ ಗುಲಗಂಜಿ

ಕೆನೆಹಾಲು ಕಲ್ಲುಸಕ್ಕರೆ ಕೋಳಿಕಳ್ಳ.

## ರತ್ನನ ಬಾಲಸಾಹಿತ್ಯ

ಗೌತಮ ಬುದ್ಧ ಯೇಸು ಕ್ರಿಸ್ತ

ಶ್ರೀ ರಾಮಚಂದ್ರ ನರಿಯ ಬಾಲ

ಅಶೋಕ ಮೌರ್ಯ ದಾನವೀರ ವಿಶ್ವಂತರ

ಶ್ರೀ ಹರ್ಷ ಪಂಚಾಯುಧ

### ದೊರೆಯುವ ಸ್ಥಳಗಳು :

ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು.

ಪ್ರೋಗ್ರೆಸ್ ಬುಕ್‌ಸ್ಟಾಲ್, ಮೈಸೂರು.

ಜೀವನ ಪುಸ್ತಕಾಲಯ, ಧಾರವಾಡ.

# ಅರಿಕೆ

ಜಗತ್ತಿನ ಬಾಲಸಾಹಿತ್ಯದಲ್ಲಿರುವ ಅತ್ಯುತ್ತಮವಾದ ಕತೆಗಳನ್ನು ನಮ್ಮ ಕನ್ನಡದ ಮಕ್ಕಳಿಗೆ ಒದಗಿಸಬೇಕೆಂಬುದು ನನಗಿರುವ ಸಣ್ಣ ಪುಟ್ಟ ಕನಸುಗಳಲ್ಲಿ ಒಂದು. ಈ ಕನಸಿನಲ್ಲಿ ಕಂಡುದನ್ನು ಕಣ್ಣಾರೆ ಕಾಣುವುದಕ್ಕೆ ಈ ಪುಸ್ತಕದಲ್ಲಿ ಮೊದಲುಮಾಡಿದ್ದೇನೆ.

ಇದರಲ್ಲಿಯ ನಾಲ್ಕು ಕತೆಗಳೂ ಇಂಗ್ಲಿಷು ಬಾಲಸಾಹಿತ್ಯದಲ್ಲಿ ಬಹಳ ಪ್ರಸಿದ್ಧವಾದುವು. ಇವುಗಳಲ್ಲಿ ಮೊದಲಿನ ಎರಡೂ "ಗ್ರಿಮ್ಸ್ ಫೇರಿ ಟೇಲ್ಸ್" ಇಂದ ತೆಗೆದುವು. ಮೂರನೆಯದು "ದಿ ಹ್ಯಾಂಡ್ ಆಫ್ ದಿ ಫಾರೆಸ್ಟ್" ಎಂಬುದರ ರೂಪಾಂತರ. ಕಡೆಯದು "ರೇನಾರ್ಡ್ ದಿ ಫಾಕ್ಸ್" ಎಂಬುದರ ಕನ್ನಡರೂಪ.

ಈ ಪುಸ್ತಕವೂ ಇದರ ಜೊತೆಗೆ ಬಂದಿರುವ ಇತರ ಬಾಲ ಸಾಹಿತ್ಯವೂ ಮಕ್ಕಳ ಕೈಯಲ್ಲಿ ಬೆಳೆಯಲೆಂದು ಬಯಸುತ್ತೇನೆ. ಆ ಬಯಕೆಯಿಂದಲೇ ಈ 'ಬಾಲಸಾಹಿತ್ಯ'ವನ್ನು ನಮ್ಮ ಕನ್ನಡನಾಡಿನ ಮಕ್ಕಳಿಗೆ ವಿಶ್ವಾಸದಿಂದ ಒಪ್ಪಿಸುತ್ತೇನೆ.

ಮಾರ್ಚ್, ೧೯೪೧
ಮಲ್ಲೇಶ್ವರಂ

ರಾಜರತ್ನಂ.

# ವಿವರ

# ೧. ನರಿಯ ಬಾಲ

ಒಂದಾನೊಂದು ಕಾಲದಲ್ಲಿ ಒಬ್ಬ ರಾಜನಿದ್ದನು. ಅವನಿಗೆ ಒಂದು ಸೊಗಸಾದ ತೋಟವಿತ್ತು. ಆ ತೋಟದಲ್ಲಿ ಚಿನ್ನದ ಸೇಬಿನ ಹಣ್ಣಿನ ಒಂದು ಮರವಿತ್ತು. ಆ ಮರದ ಸೇಬುಗಳನ್ನು ಯಾರೂ ಕದಿಯದ ಹಾಗೆ ರಾಜನು ಅವುಗಳನ್ನು ದಿನವೂ ಎಣಿಸುತ್ತಿದ್ದನು. ಆದರೆ ಅವು ಹಣ್ಣಾಗುವ ಕಾಲ ಬಂದಾಗ ಪ್ರತಿರಾತ್ರಿಯೂ ಒಂದೊಂದು ಸೇಬು ಮಾಯವಾಗುತ್ತಿತ್ತು. ಅದಕ್ಕಾಗಿ ರಾಜನು ಬಹಳ ಕೋಪಗೊಂಡು, ರಾತ್ರಿಯೆಲ್ಲಾ ಮರದ ಕೆಳಗೆ ಕಾವಲಿರಬೇಕೆಂದು ತೋಟಗಾರನಿಗೆ ಹೇಳಿದನು.

ತೋಟಗಾರನು ತೋಟದ ಕಾವಲಿಗೆ ತನ್ನ ದೊಡ್ಡ ಮಗನನ್ನು ನೇಮಿಸಿದನು. ಆದರೆ ರಾತ್ರಿ ಹನ್ನೆರಡು ಗಂಟೆಯ ಸುಮಾರಿಗೆ ಅವನು ನಿದ್ದೆ ಹೋದನು. ಬೆಳಗಿನ ವೇಳೆಗೆ ಒಂದು ಸೇಬು ಮಾಯವಾಗಿತ್ತು.

ಅನಂತರ ಎರಡನೆಯ ಮಗನನ್ನು ಕಾವಲಿಗೆ ನೇಮಿಸಿದನು. ಅವನೂ ಮಧ್ಯರಾತ್ರಿಯ ವೇಳೆಗೆ ನಿದ್ದೆ ಹೋದನು. ಬೆಳಗಾಗುವ ಹೊತ್ತಿಗೆ ಇನ್ನೊಂದು ಸೇಬು ಇಲ್ಲವಾಗಿತ್ತು.

ಬಳಿಕ ಮೂರನೆಯ ಮಗನು ತಾನು ಕಾವಲಿರುವೆನೆಂದು ಬೇಡಿದನು. ಆದರೆ ಅವನಿಗೆ ಏನಾದರೂ ಕೇಡಾಗಬಹುದೆಂಬ ಭಯದಿಂದ ತೋಟಗಾರನು ಅವನಿಗೆ ಅಪ್ಪಣೆಕೊಡಲು ಇಷ್ಟಪಡಲಿಲ್ಲ. ಹುಡುಗನು ಬಹಳ ಕೇಳಿದ ಮೇಲೆ, ಕೊನೆಗೆ ಒಪ್ಪಿದನು. ಮೂರನೆಯ ಮಗನು ಕಾವಲಿರಬೇಕಾದ ಮರದ ಕೆಳಗೆ ಮಲಗಿದನು. ಗಡಿಯಾರದಲ್ಲಿ ಹನ್ನೆರಡು ಹೊಡೆಯಿತು. ಗಾಳಿಯಲ್ಲಿ ಏನೋ ಗಳಗಳ ಶಬ್ದ ಕೇಳಿ ಬಂತು. ಒಂದು ಹಕ್ಕಿ ಹಾರುತ್ತಾ ಬಂದು ಸೇಬಿನ ಮರದ ಮೇಲೆ ಕುಳಿತುಕೊಂಡಿತು. ಆ ಹಕ್ಕಿಯ ರೆಕ್ಕೆಗಳು ಅಪ್ಪಟ ಚಿನ್ನದಿಂದಾಗಿತ್ತು. ಅದು ತನ್ನ ಕೊಕ್ಕಿನಿಂದ ಒಂದು ಸೇಬನ್ನು ಫಕ್ಕನೆ ಕಚ್ಚುತ್ತಿದ್ದಾಗ, ತೋಟಗಾರನ ಮಗನು ಮೇಲೆದ್ದು ಅದರ ಕಡೆಗೆ ಒಂದು ಬಾಣ ಬಿಟ್ಟನು. ಆದರೆ ಆ ಬಾಣದಿಂದ ಆ ಹಕ್ಕಿಗೆ

ಏನೂ ಕೇಡಾಗಲಿಲ್ಲ. ಅದು ತನ್ನ ಪಕ್ಕದಿಂದ ಒಂದು ಚಿನ್ನದ ಗರಿಯನ್ನು ಮಾತ್ರ ಬೀಳಿಸಿ, ಹಾರಿಹೋಯಿತು.

ಅವನು ಆ ಚಿನ್ನದ ಗರಿಯನ್ನು ರಾಜನ ಹತ್ತಿರ ತಂದನು. ಪರಿವಾರದವರೆಲ್ಲ ಸುತ್ತಲೂ ಬಂದರು. ಅಂತಹ ಅಂದವಾದ ಗರಿಯನ್ನು ಅದುವರೆಗೆ ಅವರು ಯಾರೂ ಕಂಡಿರಲಿಲ್ಲ. ಅದು ಬಹಳ ಬೆಲೆ ಬಾಳತಕ್ಕುದೆಂದು ಎಲ್ಲರೂ ಒಪ್ಪಿಕೊಂಡರು. ಆದರೆ ರಾಜನು ಮಾತ್ರ "ಒಂದು ಗರಿಯಿಂದ ನನಗೆ ಏನು ಉಪಯೋಗ? ನಾನು ಪೂರ್ಣ ಪಕ್ಷಿಯನ್ನೇ ಪಡೆಯಬೇಕು. ಪಡೆದೇ ಪಡೆಯುತ್ತೇನೆ" ಎಂದನು.

ತೋಟಗಾರನ ಹಿರಿಯ ಮಗನು ಚಿನ್ನದ ಹಕ್ಕಿಯನ್ನು ಹುಡುಕಲು ಹೊರಟನು. ಅದನ್ನು ಕಾಣುವುದು ಬಹಳ ಸುಲಭವೆಂದು ಅವನು ತಿಳಿದುಕೊಂಡಿದ್ದನು. ಸ್ವಲ್ಪ ದೂರ ಹೋಗುವುದರಲ್ಲಿ ಒಂದು ಕಾಡು ಸಿಕ್ಕಿತು. ಅದರ ಒಂದು ಪಕ್ಕದಲ್ಲಿ ಒಂದು ನರಿ ಕುಳಿತಿತ್ತು. ಹಿರಿಯವನಿಗೆ ಇನ್ನೂ ಹುಡುಗಾಟ. ತನ್ನ ಬಿಲ್ಲನ್ನು ಎಳೆದು ಅದರ ಕಡೆಗೆ ಬಾಣ ಹೂಡಿದನು.

ನರಿ ಅದನ್ನು ಕಂಡು "ಅಯ್ಯೋ, ಅಯ್ಯೋ, ನನ್ನನ್ನು ಹೊಡೆಯಬೇಡ. ನಾನು ನಿನಗೆ ಒಳ್ಳೆಯ ಸಲಹೆ ಕೊಡುತ್ತೇನೆ. ನೀನು ಹೊರಟಿರುವ ಕೆಲಸವೇನೆಂಬುದು ನನಗೆ ಗೊತ್ತು. ನೀನು ಚಿನ್ನದ ಹಕ್ಕಿಯನ್ನು ಕಾಣಬೇಕೆಂದು ಬಯಸುತ್ತೀಯೆ. ಈ ದಿನ ಸಂಜೆ ನೀನು ಒಂದು ಹಳ್ಳಿಯನ್ನು ತಲುಪುತ್ತೀಯೆ. ಆ ಹಳ್ಳಿಯಲ್ಲಿ, ರಸ್ತೆಯ ಎರಡು ಪಕ್ಕಗಳಲ್ಲಿಯೂ ಕಟ್ಟಿರುವ ಎರಡು ಅನ್ನಸತ್ರಗಳನ್ನು ಕಾಣುತ್ತೀಯೆ. ಬಲಗಡೆಯಲ್ಲಿರುವುದು ನೋಟಕ್ಕೆ ಅಂದವಾಗಿ ಮನೋಹರವಾಗಿದೆ; ಆದರೆ ಅದರ ಒಳಗೆ ಹೋಗಬೇಡ. ಇನ್ನೊಂದು ಪಾಳು ಪಾಳಾಗಿ ಬಡಕಲಾಗಿ ಕಂಡುಬಂದರೂ ರಾತ್ರಿ ಅಲ್ಲಿಯೇ ವಿಶ್ರಮಿಸಿಕೊ" ಎಂದು ಕೂಗಿ ಹೇಳಿತು.

ಆದರೆ ಅವನು ಅದರ ಮಾತನ್ನು ಗಮನಿಸಲಿಲ್ಲ. "ಈ ವಿಚಾರಗಳು ಇಂತಹ ಪ್ರಾಣಿಗೆ ಏನು ಗೊತ್ತು?" ಎಂದು ಆ ತಿಳಿಗೇಡಿ ತನ್ನ

ಬಿಲ್ಲನ್ನು ನರಿಯ ಕಡೆ ತಿರುಗಿಸಿ ಬಾಣಬಿಟ್ಟನು. ನರಿ ಪಕ್ಕಕ್ಕೆ ನೆಗೆದು ತಪ್ಪಿಸಿಕೊಂಡಿತು. ತಪ್ಪಿಸಿಕೊಂಡು, ಅವನ ಕಡೆ ನೋಡಿ ನಗುತ್ತಾ ತನ್ನ ಬಾಲವನ್ನು ಬೆನ್ನಮೇಲೆ ಹಾಕಿಕೊಂಡು ಕಾಡಿನೊಳಕ್ಕೆ ಓಡಿ ಹೋಯಿತು.

ಯುವಕನು ತನ್ನ ದಾರಿಹಿಡಿದನು. ಸಂಜೆಯ ವೇಳೆಗೆ ಎರಡು ಅನ್ನಸತ್ರಗಳಿದ್ದ ಹಳ್ಳಿಗೆ ಬಂದನು. ಬಲಗಡೆಯದರಲ್ಲಿ ಜನರು ಹಾಡುತ್ತಾ ಸಂತೋಷಪಡುತ್ತಿದ್ದರು. ಇನ್ನೊಂದು ಬಹಳ ಕೊಳಕುಕೊಳಕಾಗಿತ್ತು. "ಇಂತಹ ಮನೋಹರವಾದ ಸತ್ರವನ್ನು ಬಿಟ್ಟು ಈ ಪಾಳಿಗೆ ಹೋಗುವುದಕ್ಕೆ ನನಗೇನೂ ಬುದ್ಧಿಕೆಟ್ಟಿಲ್ಲ" ಎಂದುಕೊಂಡು ಅವನು ಆ ಬಲಗಡೆಯ ಸತ್ರಕ್ಕೆ ಹೋದನು. ಅಲ್ಲಿ ಬೇಕಾದ ಹಾಗೆ ತಿಂದನು, ಕುಡಿದನು. ತನ್ನ ದೇಶವನ್ನೂ ತಾನು ಹಕ್ಕಿ ಹುಡುಕುತ್ತ ಬಂದುದನ್ನೂ ಮರೆತು, ಅಲ್ಲಿಯೇ ನೆಲಸಿದನು.

ಕೊಂಚ ಕಾಲ ಕಳೆಯಿತು. ತೋಟಗಾರನ ಹಿರಿಯಮಗ ಹಿಂದಿರುಗಲೂ ಇಲ್ಲ, ಅವನ ಸುದ್ದಿ ತಿಳಿದುಬರಲೂ ಇಲ್ಲ. ಅದರಿಂದ ಎರಡನೆಯ ಮಗ ತಾನೂ ಹೊರಟನು. ಅವನಿಗೂ ಮೊದಲನೆಯವನಿಗೆ ಆದಂತೆಯೇ ಆಯಿತು. ಕಾಡುದಾರಿಯ ಪಕ್ಕದ ನರಿ ಅವನಿಗೂ ಎದುರಾಯಿತು. ಅವನ ಅಣ್ಣನಿಗೆ ಹೇಳಿದ ಬುದ್ಧಿವಾದವನ್ನೇ ಅವನಿಗೂ ಹೇಳಿತು. ಅವನೂ ಆ ಎರಡು ಅನ್ನಸತ್ರಗಳ ಹಳ್ಳಿಗೆ ಬಂದನು. ಅವನ ಅಣ್ಣ ಬಲಗಡೆಯ ಮನೆಯ ಕಿಟಕಿಯ ಹತ್ತಿರ ನಿಂತಿದ್ದನು. ತಮ್ಮನನ್ನು ಕಂಡು ಒಳಗೆ ಕರೆದನು. ತಮ್ಮನು ಅಲ್ಲಿಗೆ ಹೋಗಬೇಕೆಂಬ ಆಸೆಯನ್ನು ಎದುರಿಸಲಾರದೆ ಒಳಗೆ ಹೋದನು. ಅಲ್ಲಿ ಇದ್ದವರ ಜೊತೆಯಲ್ಲಿ ತಿಂದೂ ಕುಡಿದೂ ಅವರಂತೆಯೇ ತನ್ನ ದೇಶವನ್ನೂ ತಾನು ಚಿನ್ನದ ಪಕ್ಷಿಗಾಗಿ ಬಂದುದನ್ನೂ ಮರೆತನು.

ಇನ್ನೂ ಕೊಂಚ ಕಾಲ ಕಳೆದ ಬಳಿಕ, ಚಿನ್ನದ ಹಕ್ಕಿಯನ್ನು ಹುಡುಕಿಕೊಂಡು ಬರುವುದಕ್ಕೋಸ್ಕರ ಹೋಗಬೇಕೆಂದು ಕಡೆಯ ಮಗನೂ ಆಸೆಪಟ್ಟನು. ಆದರೆ ತಂದೆಗೆ ಅವನನ್ನು ಕಂಡರೆ ಬಹಳ ಪ್ರೀತಿ.

ಆದ್ದರಿಂದ ಅವನಿಗೂ ಏನಾದರೂ ಕೇಡು ತಾಗಿ ಅವನೂ ಹಿಂದಿರುಗದಿರಬಹುದೆಂಬ ಭಯದಿಂದ ಬಹಳಕಾಲ ಅವನ ಪ್ರಾರ್ಥನೆಗೆ ಕಿವಿಗೊಡಲಿಲ್ಲ. ಆದರೆ ಕಡೆಯಲ್ಲಿ ಮಗನ ಹಟವೇ ಗೆದ್ದಿತು. ಅವನಿಗೆ ಮನೆಯಲ್ಲಿ ಸಮಾಧಾನವಿಲ್ಲದುದನ್ನು ಕಂಡು ತಂದೆಯು ಅವನನ್ನು ಕಳುಹಿಸಲು ಒಪ್ಪಿದನು.

ಮೂರನೆಯ ಮಗನು ಹಿಂದಿನವರು ದಾಟಿದ ಕಾಡಿಗೆ ತಾನೂ ಬಂದಾಗ, ಅವನ ಅಣ್ಣಂದಿರಿಗೆ ಒಳ್ಳೆಯ ಬುದ್ಧಿವಾದವನ್ನು ಹೇಳಿದ ನರಿ ಅವನಿಗೂ ಎದುರಾಯಿತು. ಆದರೆ ಅವನು ಮಾತ್ರ ನರಿಯ ಬುದ್ಧಿವಾದಕ್ಕೆ ಕೃತಜ್ಞನಾಗಿ, ತನ್ನ ಅಣ್ಣಂದಿರು ಮಾಡಿದ ಹಾಗೆ ಅದರ ಕಡೆ ಬಾಣ ಬಿಡಲಿಲ್ಲ. ನರಿ ಅದನ್ನು ಕಂಡು, "ನನ್ನ ಬಾಲದ ಮೇಲೆ ಕುಳಿತುಕೊ. ನೀನು ಬಹು ವೇಗವಾಗಿ ಪ್ರಯಾಣಮಾಡಬಹುದು" ಎಂದಿತು. ಅವನು ಹಾಗೆಯೇ ಅದರ ಬಾಲದ ಮೇಲೆ ಕುಳಿತನು. ನರಿ ಓಡತೊಡಗಿತು. ಅದು ಓಡಿದ ರಭಸಕ್ಕೆ ಅವನ ಕೂದಲು ಗಾಳಿಯಲ್ಲಿ ಭರ್ರೆಂದು ಆಡುತ್ತಿತ್ತು. ಹಾಗೆಯೇ ಅವರು ತಗ್ಗುತಿಟ್ಟುಗಳನ್ನು ದಾಟಿ ದೂರ ಹೋದರು.

ನರಿಯೂ ಮೂರನೆಯ ಮಗನೂ ಆ ಎರಡು ಸತ್ರಗಳ ಹಳ್ಳಿಗೆ ಬಂದರು. ನರಿಯ ಬುದ್ಧಿವಾದವನ್ನು ಅನುಸರಿಸುವಷ್ಟು ಬುದ್ಧಿ ಅವನಿಗೆ ಇತ್ತು. ಬಲಗಡೆಯ ಅನ್ನಸತ್ರದ ಕಡೆ ತಿರುಗಿ ಕೂಡ ನೋಡದೆ ಎಡಗಡೆಯ ಪಾಳುಸತ್ರಕ್ಕೆ ಹೋಗಿ ರಾತ್ರಿಯೆಲ್ಲಾ ಬೇಕಾದಂತೆ ವಿಶ್ರಮಿಸಿಕೊಂಡನು.

ಬೆಳಗಾಗುವ ಹೊತ್ತಿಗೆ ನರಿ ಪುನಃ ಬಂದಿತು. ಬಂದು, ಅವನು ಪ್ರಯಾಣಕ್ಕೆ ಸಿದ್ಧವಾಗುತ್ತಿರುವಾಗ "ಮುಂದೆ ಒಂದು ಅರಮನೆ ಸಿಕ್ಕುತ್ತದೆ. ಅಲ್ಲಿ ಒಂದು ದೊಡ್ಡಸೇನೆ ಗೊರಕ್ಕೆ ಬಿಡುತ್ತ ಮಲಗಿರುತ್ತದೆ. ಆ ಸೇನೆಯನ್ನು ನೀನು ಗಮನಿಸಬೇಡ. ನೇರವಾಗಿ ಅರಮನೆಯೊಳಕ್ಕೆ ಹೋಗು. ಒಂದು ಮರದ ಪಂಜರದಲ್ಲಿ ಆ ಚಿನ್ನದ ಹಕ್ಕಿಯಿರುವ ಕೋಣೆ ಸಿಕ್ಕುವ ವರೆಗೂ ಹೋಗು. ಆ ಮರದ ಪಂಜರದ ಬಳಿಯಲ್ಲಿಯೇ ಒಂದು ಅಂದವಾದ ಚಿನ್ನದ ಪಂಜರವಿದೆ. ಆದರೆ ಆ ಹಕ್ಕಿ

ಯನ್ನು ಮರದ ಪಂಜರದಿಂದ ತೆಗೆದು ಚಿನ್ನದ ಪಂಜರದಲ್ಲಿ ಇಡಲು ಯತ್ನಿಸಬೇಡ. ಹಾಗೆ ಮಾಡಿದರೆ, ಆಮೇಲೆ ದುಃಖಪಡುತ್ತೀಯೆ" ಎಂದು ಹೇಳಿ, ಪುನಃ ತನ್ನ ಬಾಲವನ್ನು ಚಾಚಿತು. ಹುಡುಗನು ಅದರ ಮೇಲೆ ಕುಳಿತುಕೊಂಡನು. ಅವರು ಪುನಃ ತಗ್ಗುತಿಟ್ಟುಗಳನ್ನು ದಾಟಿ ದೂರಹೋದರು.

ಅರಮನೆಯ ಬಾಗಿಲಿನ ಮುಂದೆ ಎಲ್ಲವೂ ನರಿಯು ಹೇಳಿದ ಹಾಗೆಯೆ ಇತ್ತು. ಹುಡುಗನು ಒಳಗೆ ಹೋದನು. ಮರದ ಪಂಜರ ದಲ್ಲಿ ಚಿನ್ನದ ಹಕ್ಕಿಯಿದ್ದ ಕೊಠಡಿಯನ್ನು ಸೇರಿದನು. ಕೆಳಗೆ ಚಿನ್ನದ ಪಂಜರವಿತ್ತು. ಪಕ್ಕದಲ್ಲಿ, ತೋಟದಿಂದ ಕಳೆದುಹೋಗಿದ್ದ ಮೂರು ಚಿನ್ನದ ಸೇಬುಗಳು ಬಿದ್ದಿದ್ದುವು. ಅವನು "ಇಂಥ ಅಂದವಾದ ಹಕ್ಕಿ ಯನ್ನು ಇಂಥ ದರಿದ್ರ ಪಂಜರದಲ್ಲಿ ಒಯ್ಯುವುದು ನಗೆಗೇಡು" ಎಂದು ಚಿಂತಿಸಿ, ಮರದ ಪಂಜರದ ಬಾಗಿಲು ತೆಗೆದು ಹಕ್ಕಿಯನ್ನು ಹಿಡಿದು ಚಿನ್ನದ ಪಂಜರದಲ್ಲಿರಿಸಿದನು. ಒಡನೆ ಆ ಹಕ್ಕಿ ಕಿರಿಚಿಕೊಂಡಿತು. ಆ ಕೂಗು ಕೇಳಿ ಸೈನಿಕರೆಲ್ಲ ಎದ್ದರು. ಅವನನ್ನು ಸೆರೆಹಿಡಿದು ರಾಜನ ಬಳಿಗೆ ಒಯ್ದರು.

ಮರುದಿನ ರಾಜನ ಪರಿವಾರ ವಿಚಾರಣೆಗೆ ಕುಳಿತುಕೊಂಡಿತು. ವಿಚಾರಣೆಯಾಯಿತು. "ಹುಡುಗನು ಗಾಳಿಯಂತೆ ವೇಗವಾದ ಚಿನ್ನದ ಕುದುರೆಯನ್ನು ತರಬೇಕು. ತರದಿದ್ದರೆ ಸಾಯಬೇಕು. ತಂದರೆ ಅವನಿಗೆ ಚಿನ್ನದ ಹಕ್ಕಿಯನ್ನು ಕೊಡಬೇಕು" ಎಂದು ತೀರ್ಮಾನವಾಯಿತು.

ಹುಡುಗನು ತನ್ನ ಆಸೆ ಹಾಳಾದುದಕ್ಕೆ ದುಃಖಪಡುತ್ತ ನಿಟ್ಟು ಸಿರುಬಿಡುತ್ತ ಮುಂದೆ ಹೊರಟನು. ದಾರಿಯಲ್ಲಿ ಅವನಿಗೆ ಬುದ್ಧಿ ಹೇಳಿದ ನರಿ ಸಿಕ್ಕಿತು. ಅವನನ್ನು ಕುರಿತು "ಅಯ್ಯಾ, ಒಳ್ಳೆಯ ಕೆಲಸ ಮಾಡಿದೆ! ನನ್ನ ಸಲಹೆಗೆ ಕಿವಿ ಕೊಡದುದರಿಂದ ಏನೇನು ಸಂಭವಿಸಿತು, ನೋಡು. ಈಗಲಾದರೂ ನಾನು ಹೇಳುವುದನ್ನು ಕೇಳು. ಚಿನ್ನದ ಕುದುರೆ ಹೇಗೆ ದೊರಕುವುದೆಂಬುದನ್ನು ಹೇಳಿಕೊಡುತ್ತೇನೆ. ಮುಂದೆ ಒಂದು ಅರ ಮನೆ ಸಿಕ್ಕುತ್ತದೆ. ಅಲ್ಲಿಯ ಲಾಯದಲ್ಲಿ ಆ ಕುದುರೆ ನಿಂತಿರುತ್ತದೆ. ನೆಟ್ಟಗೆ ಅದರ ಬಳಿಗೆ ಹೋಗು. ಅದರ ಪಕ್ಕದಲ್ಲಿ ಕಾವಲುಗಾರನು

ಗೊರಕೆಬಿಡುತ್ತ ಮಲಗಿರುತ್ತಾನೆ. ಕುದುರೆಯನ್ನು ಮೆಲ್ಲಗೆ ಕರೆದು ಕೊಂಡು ಬಂದು ಬಿಡು. ಆದರೆ, ಜೋಕೆ. ಅದರ ಬೆನ್ನಮೇಲಿರುವ ಹಳೆಯ ಚಕ್ಕಳದ ಜೀನು ತೆಗೆಯಬೇಡ, ಅದರ ಹತ್ತಿರವಿರುವ ಚಿನ್ನದ ಜೀನು ಹಾಕಬೇಡ" ಎಂದಿತು. ಹುಡುಗನು ಹಾಗೆಯೇ ಆಗಲೆಂದು ಅದರ ಬಾಲದ ಮೇಲೆ ಕುಳಿತುಕೊಂಡನು. ಅವರು ಪುನಃ ತಗ್ಗುತಿಟ್ಟು ಗಳನ್ನು ದಾಟಿ ದೂರ ಹೋದರು.

ಎಲ್ಲವೂ ನರಿ ಹೇಳಿದಂತೆಯೆ ಇತ್ತು. ಕಾವಲುಗಾರನು ತನ್ನ ಕೈಯನ್ನು ಚಿನ್ನದ ಜೀನಿನ ಮೇಲಿಟ್ಟುಕೊಂಡು ಗೊರಕೆ ಹೊಡೆಯುತ್ತ ಮಲಗಿದ್ದನು. ಕುದುರೆಯನ್ನು ನೋಡಿದಾಗ ಅದನ್ನು ಹಾಗೆಯೇ ಚಕ್ಕಳದ ಜೀನಿನೊಡನೆ ಕರೆತರುವುದಕ್ಕೆ ಮನಸ್ಸು ಬರಲಿಲ್ಲ. 'ಇದಕ್ಕೆ ಒಳ್ಳೆಯ ಜೀನು ಹಾಕುತ್ತೇನೆ. ಚಿನ್ನದ ಜೀನೇ ಇದಕ್ಕೆ ಯೋಗ್ಯ ವಾದುದು' ಎಂದುಕೊಂಡು ಚಿನ್ನದ ಜೀನನ್ನು ತೆಗೆದುಕೊಂಡಾಗ ಕಾವಲುಗಾರನಿಗೆ ಎಚ್ಚರವಾಯಿತು. ಅವನ ಕೂಗು ಕೇಳಿ ಉಳಿದ ಕಾವಲುಗಾರರೆಲ್ಲರೂ ಓಡಿಬಂದು ಅವನನ್ನು ಸೆರೆಹಿಡಿದರು. ಮಾರನೆಯ ಬೆಳಗ್ಗೆ ಅವನನ್ನು ವಿಚಾರಿಸುವುದಕ್ಕಾಗಿ ರಾಜನ ಪರಿವಾರ ಸೇರಿತು. ಪುನಃ ಅವನಿಗೆ ಮರಣದಂಡನೆ ವಿಧಿಯಾಯಿತು. ಆದರೆ ಅವನು ಸುಂದರರಾಜಕುಮಾರಿಯನ್ನು ಕರೆದುತಂದರೆ, ತಾನೂ ಜೀವದಿಂದ ಉಳಿದು ಕುದುರೆಯನ್ನೂ ಕೊಂಡುಹೋಗಬಹುದೆಂದು ತೀರ್ಮಾನಿಸಿ ದರು.

ಹುಡುಗನು ಪುನಃ ವ್ಯಸನಪಡುತ್ತ ತನ್ನ ದಾರಿ ತಾನು ಹಿಡಿದನು. ಪುನಃ ಅದೇ ನರಿ ಅವನಿಗೆ ದಾರಿಯಲ್ಲಿ ಎದುರಾಯಿತು. "ನೀನು ಏಕೆ ನನ್ನ ಮಾತು ಕೇಳಲಿಲ್ಲ? ನನ್ನ ಮಾತು ಕೇಳಿದ್ದಿದ್ದರೆ, ಕುದುರೆ ಯನ್ನೂ ಪಕ್ಷಿಯನ್ನೂ ಎರಡನ್ನೂ ಪಡೆಯಬಹುದಾಗಿತ್ತು. ಆದರೂ ಪುನಃ ನಿನಗೆ ಸಲಹೆ ಕೊಡುತ್ತೇನೆ. ನೇರವಾಗಿ ಹೋಗು. ಸಂಜೆ ಒಂದು ಅರಮನೆಗೆ ಬರುತ್ತೀಯೆ. ಅಲ್ಲಿ ರಾತ್ರಿ ಹನ್ನೆರಡು ಗಂಟೆಗೆ ಆ ರಾಜಕುಮಾರಿ ಸ್ನಾನಕ್ಕೆ ಹೋಗುತ್ತಾಳೆ. ಅವಳು ಹಾಯ್ದು ಹೋಗುವಾಗ ಅವಳ ಹತ್ತಿರ ಹೋಗಿ ಕೈಹಿಡಿದುಕೊ. ಅವಳು ನಿನ್ನೊಡನೆ

ಬಂದು ಬಿಡುತ್ತಾಳೆ. ಆದರೆ ಅವಳು ಎಷ್ಟೇ ಕೇಳಿಕೊಂಡರೂ ತನ್ನ ತಂದೆತಾಯಿಗಳಿಗೆ ಹೇಳಿ ಬರಲು ಬಿಡಬೇಡ" ಎಂದು ಹೇಳಿ, ಪುನಃ ತನ್ನ ಬಾಲವನ್ನು ಹರಡಿತು. ಪುನಃ ಅವನು ಅದರ ಮೇಲೆ ಕುಳಿತನು. ಪುನಃ ಅವರು ತಗ್ಗುತಿಟ್ಟುಗಳನ್ನು ದಾಟಿ ದೂರಹೋದರು.

ಅರಮನೆಯ ಹತ್ತಿರ ಬಂದಾಗ ಎಲ್ಲವೂ ನರಿ ಹೇಳಿದಂತೆಯೆ ಆಯಿತು. ಹನ್ನೆರಡು ಗಂಟೆಗೆ ರಾಜಕುಮಾರಿ ಸ್ನಾನಕ್ಕೆ ಬಂದಾಗ ಅವನು ಅವಳ ಕೈಹಿಡಿದನು. ಅವಳು ಅವನೊಡನೆ ಹೋಗಲು ಒಪ್ಪಿದಳು. ಆದರೆ ತನ್ನ ತಂದೆತಾಯಿಗಳನ್ನು ನೋಡಿಕೊಂಡು ಬರಬೇಕೆಂದು ಬಹಳ ಅತ್ತು ಬೇಡಿಕೊಂಡಳು. ಮೊದಲುಮೊದಲು ಅವನು ಎಷ್ಟೋ ಬೇಡವೆಂದನು. ಆದರೆ ಅವನು ಒಪ್ಪುವವರೆಗೂ ಅವಳು ಸುಮ್ಮನಾಗಲಿಲ್ಲ. ಅವನ ಕಾಲಿಗೆ ಬಿದ್ದಳು, ಅತ್ತು ಅತ್ತು ಬೇಡಿದಳು. ಕಡೆಗೆ ಅವನ ಒಪ್ಪಿಗೆ ಪಡೆದು ಅವಳು ತನ್ನ ತಂದೆಯ ಆರಮನೆಯ ಬಾಗಿಲಿಗೆ ಬಂದ ಒಡನೆಯೇ ಕಾವಲಿನವರು ಎದ್ದರು. ಅವನನ್ನು ಸೆರೆ ಹಿಡಿದರು. ಅಲ್ಲಿಯ ಅರಸನ ಮುಂದೆ ಕರೆದುತಂದರು.

ಆ ರಾಜನು "ನನ್ನ ಕಿಟಕಿಯಿಂದ ಹೊರಗೆ ಈ ಗುಡ್ಡ ಅಡ್ಡವಾಗಿದೆ. ಈ ಗುಡ್ಡವನ್ನು ಇನ್ನು ಎಂಟು ದಿನಗಳೊಳಗೆ ನೀನು ಅಗೆದು ಹಾಕಿದ ಹೊರತು ನೀನು ನನ್ನ ಮಗಳನ್ನು ಪಡೆಯುವಂತಿಲ್ಲ" ಎಂದನು.

ಆ ಗುಡ್ಡ ಪ್ರಪಂಚದ ಜನರೆಲ್ಲ ಅಗೆದರೂ ಮುಗಿಯದಷ್ಟು ದೊಡ್ಡದಾಗಿತ್ತು. ಅವನು ಏಳು ದಿವಸ ಕೆಲಸ ಮಾಡಿದರೂ ಗುಡ್ಡ ಸ್ವಲ್ಪವೂ ಕರಗಿರಲಿಲ್ಲ. ಆಗ ನರಿ ಬಂದು, "ಹೋಗು, ಮಲಗಿ ನಿದ್ದೆಮಾಡು. ನಾನು ನಿನಗಾಗಿ ಕೆಲಸಮಾಡುತ್ತೇನೆ" ಎಂದಿತು. ಅವನು ಬೆಳಗ್ಗೆ ಏಳುವ ವೇಳೆಗೆ ಗುಡ್ಡ ಮಾಯವಾಗಿತ್ತು. ಅವನು ಅದನ್ನು ಕಂಡು ಬಹಳ ಉಲ್ಲಾಸದಿಂದ ರಾಜನ ಹತ್ತಿರ ಹೋಗಿ ರಾಜಕುಮಾರಿಯನ್ನು ಕೊಡಬೇಕೆಂದು ಕೇಳಿದನು. ರಾಜನು ತಾನು ಆಡಿದ ಮಾತನ್ನು ನಡೆಸಬೇಕಾಯಿತು. ರಾಜಕುಮಾರಿಯು ಆ ಹುಡುಗನ ಜೊತೆಯಲ್ಲಿ ಹೊರಟಳು.

ಪುನಃ ನರಿ ಅವನ ಎದುರಿಗೆ ಬಂದಿತು. ಅವನನ್ನು ಕುರಿತು "ಇದು ಇಷ್ಟೇ ಸಾಲದು. ನಾವು ರಾಜಕುಮಾರಿ, ಕುದುರೆ, ಪಕ್ಷಿ ಈ ಮೂರನ್ನೂ ಪಡೆಯಬೇಕು" ಎಂದಿತು. "ಅದು ಹೇಗೆ ಸಾಧ್ಯ?" ಎಂದು ಹುಡುಗನು ಕೇಳಿದನು. ನರಿಯು "ನಾನು ಹೇಳಿದ ಹಾಗೆ ನೀನು ಕೇಳಿದರೆ ಮಾತ್ರ ಅದು ಸಾಧ್ಯ. ಚಿನ್ನದ ಕುದುರೆಯಿರುವ ರಾಜನ ಅರಮನೆಗೆ ಬಂದಾಗ 'ಸುಂದರರಾಜಕುಮಾರಿಯೆಲ್ಲಿ?' ಎಂದು ಅವನು ಕೇಳುತ್ತಾನೆ. 'ಇಲ್ಲಿ ಇದ್ದಾಳೆ' ಎಂದು ನೀನು ಹೇಳು. ಅವನು ಸಂತೋಷಪಟ್ಟು ಅವಳನ್ನು ಎದುರುಗೊಳ್ಳುವುದಕ್ಕೆ ಹೋದಾಗ, ಅವರು ಕೊಡುವ ಚಿನ್ನದ ಕುದುರೆಯನ್ನು ನೀನು ಏರು. ಹೊರಡುವಾಗ ಎಲ್ಲರನ್ನೂ ಮಾತನಾಡಿಸುತ್ತ, ಕಡೆಗೆ ರಾಜಕುಮಾರಿಯ ಹತ್ತಿರ ಬಂದಾಗ, ಅವಳನ್ನು ಎತ್ತಿ ಕುದುರೆಯ ಮೇಲೆ ಕೂರಿಸಿಕೊಂಡು, ಓಡಿಹೋಗಿಬಿಡು" ಎಂದು ಹೇಳಿಕೊಟ್ಟಿತು.

ಹುಡುಗನು ಈ ಬಾರಿ ನರಿ ಹೇಳಿದಂತೆ ನಡೆದುಕೊಂಡನು. ಕುದುರೆಯ ಮೇಲೆ ರಾಜಕುಮಾರಿಯನ್ನು ಕರೆದೊಯ್ಯುವಾಗ ನರಿ ಪುನಃ ಎದುರಿಗೆ ಬಂದಿತು. "ಚಿನ್ನದ ಪಕ್ಷಿಯಿರುವ ಅರಮನೆಗೆ ನೀನು ಬಂದಾಗ, ರಾಜಕುಮಾರಿಯೂ ನಾನೂ ಬಾಗಿಲ ಹೊರಗೆ ನಿಲ್ಲುತ್ತೇವೆ. ನೀನು ಒಳಗೆ ಹೋಗಿ ರಾಜನ ಹತ್ತಿರ ಮಾತನಾಡು. ಅವನು ಅದೇ ಚಿನ್ನದ ಪಕ್ಷಿಯನ್ನು ಹೊರಗೆ ತಂದಾಗ, ನೀನು ಇನ್ನೂ ಕುದುರೆಯ ಮೇಲೆಯೆ ಕುಳಿತುಕೊಂಡು, 'ಇದು ನಿಜವಾದ ಚಿನ್ನದ ಪಕ್ಷಿ ಹೌದೋ ಅಲ್ಲವೋ ನೋಡಬೇಕು' ಎಂದು ಹೇಳು. ಅವನು ಅದನ್ನು ನಿನ್ನ ಕೈಯಲ್ಲಿ ಕೊಟ್ಟಾಗ, ಕುದುರೆಯನ್ನು ಓಡಿಸಿಕೊಂಡು ಬಂದುಬಿಡು" ಎಂದಿತು.

ಪುನಃ ಎಲ್ಲವೂ ನರಿ ಹೇಳಿದಂತೆಯೆ ನಡೆಯಿತು. ಅವನು ಪಕ್ಷಿಯನ್ನೂ ರಾಜಕುಮಾರಿಯನ್ನೂ ಎತ್ತಿಕೊಂಡು ಕಾಡಿಗೆ ಬಂದನು. ಅಲ್ಲಿ ಅವನ ಹಳೆಯ ಸ್ನೇಹದ ನರಿ ಪುನಃ ಎದುರಿಗೆ ಬಂದಿತು. ಬಂದು, "ದಯೆಮಾಡಿ ನನ್ನನ್ನು ಕೊಲ್ಲು. ನನ್ನ ತಲೆಯನ್ನೂ ಬಾಲವನ್ನೂ ಕತ್ತರಿಸಿ ಹಾಕು" ಎಂದು ಬೇಡಿಕೊಂಡಿತು. ಇಷ್ಟು ಉಪಕಾರ

ಮಾಡಿದ ನರಿಯನ್ನು ಹೀಗೆ ಕೊಲ್ಲಲು ಹುಡುಗನಿಗೆ ಮನಸ್ಸು ಬರಲಿಲ್ಲ. ಕಡೆಗೆ ನರಿ "ಹೋಗಲಿ ಬಿಡು. ಆದರೆ ನನ್ನ ಬುದ್ಧಿವಾದವನ್ನು ಕೇಳು. ಮರಣದಂಡನೆಗೆ ಗುರಿಯಾದ ಯಾರನ್ನೂ ಬಿಡಿಸಬೇಡ. ಹರಿಯುವ ಕಾಲುವೆಯ ಪಕ್ಕದಲ್ಲಿ ಕುಳಿತುಕೊಳ್ಳಬೇಡ. ಮರೆತೀಯೆ, ಜೋಕೆ" ಎಂದು ಎಚ್ಚರಿಸಿ ಹೋಯಿತು. ಈ ಬುದ್ಧಿವಾದವನ್ನು ನಡಸುವುದು ಏನೂ ಕಷ್ಟವಲ್ಲವೆಂದು ಅವನು ರಾಜಕುಮಾರಿಯೊಡನೆ ಮುಂದೆ ಹೋದನು.

ಕೊನೆಗೆ ತನ್ನ ಇಬ್ಬರು ಅಣ್ಣಂದಿರು ಇದ್ದ ಹಳ್ಳಿಗೆ ಬಂದನು. ಅಲ್ಲಿ ಏನೋ ಬಹಳ ಗದ್ದಲವಾಗುತ್ತಿತ್ತು. ಅದು ಏನೆಂದು ಅವನು ವಿಚಾರಿಸಿದಾಗ, ಇಬ್ಬರು ಕಳ್ಳರನ್ನು ಗಲ್ಲಿಗೆ ಏರಿಸುತ್ತಿರುವರೆಂದು ತಿಳಿದುಬಂದಿತು. ಹತ್ತಿರ ಹೋದಾಗ ಆ ಕಳ್ಳರು ತನ್ನ ಇಬ್ಬರು ಅಣ್ಣಂದಿರೆಂದು ಕಂಡುಬಂದಿತು. ಅವರ ದುರವಸ್ಥೆಯನ್ನು ಅವನು ನೋಡಲಾರದೆ, ಅವರನ್ನು ಬದುಕಿಸಬೇಕೆಂದು ಬಹಳವಾಗಿ ಪೇಚಾಡಿದನು. ತನ್ನ ಹತ್ತಿರ ಇದ್ದ ಹಣವನ್ನೆಲ್ಲಾ ಆ ನೀಚರಿಗೋಸ್ಕರ ವೆಚ್ಚಮಾಡಿ, ಅವರ ಬಿಡುಗಡೆಯನ್ನು ಪಡೆದನು. ಆ ಹಳ್ಳಿಯವರು ಕೇಳಿದುದನ್ನೆಲ್ಲ ಅವರಿಗೆ ಕೊಟ್ಟು, ಅಣ್ಣಂದಿರನ್ನು ಕರೆದುಕೊಂಡು ಮುಂದೆ ಹೋದನು.

ದಾರಿಯಲ್ಲಿ ಬರುವಾಗ ಬಿಸಿಲು ಹೆಚ್ಚಾಯಿತು. ಅವರು ನರಿಯನ್ನು ಮೊದಲು ಕಂಡ ಕಾಡಿಗೆ ಬಂದಾಗ, ಅಲ್ಲಿ ಹರಿಯುತ್ತಿದ್ದ ಒಂದು ಕಾಲುವೆಯ ಪಕ್ಕದಲ್ಲಿ ಮರಗಳ ಕೆಳಗೆ ತಂಪಾದ ನೆರಳನ್ನು ಕಂಡರು. "ಈ ಕಾಲುವೆಯ ಪಕ್ಕದ ನೆರಳಿನಲ್ಲಿ ಕುಳಿತು ವಿಶ್ರಮಿಸಿಕೊಳ್ಳೋಣ. ತಿಂದು ಹಸಿವನ್ನೂ ಕುಡಿದು ದಾಹವನ್ನೂ ಕಳೆದುಕೊಳ್ಳೋಣ" ಎಂದು ಆ ಇಬ್ಬರು ಅಣ್ಣಂದಿರೂ ಆಗ ತಮ್ಮನಿಗೆ ಹೇಳಿದರು. ತಮ್ಮನು ಹಾಗೆಯೇ ಆಗಲೆಂದು ಒಪ್ಪಿದನು. ನರಿ ಹೇಳಿದ್ದುದನ್ನು ಮರೆತು ಕಾಲುವೆಯ ಪಕ್ಕದಲ್ಲಿ ಕುಳಿತುಕೊಂಡನು.

ಅವನು ತನಗೆ ಏನಾದರೂ ಕೇಡಾಗಬಹುದೆಂಬ ಯೋಚನೆಯನ್ನೇ ಮಾಡದೆ ಕುಳಿತಿರುವಾಗ, ಆ ಇಬ್ಬರೂ ಅವನ ಹಿಂದೆ ಮೆಲ್ಲಗೆ ಬಂದು, ಅವನನ್ನು ದಡದಿಂದ ಕೆಳಗೆ ತಳ್ಳಿಬಿಟ್ಟರು. ಅನಂತರ ರಾಜ

ಕುಮಾರಿಯನ್ನೂ ಕುದುರೆ ಹಕ್ಕಿಗಳನ್ನೂ ಜೊತೆಯಲ್ಲಿ ಕರೆದುಕೊಂಡು ತಮ್ಮ ಯಜಮಾನನಾದ ರಾಜನ ಮನೆಗೆ ಹೋಗಿ, "ಇವೆಲ್ಲವನ್ನೂ ನಾವು ನಮ್ಮ ಸ್ವಂತ ದೇಹಬಲದಿಂದಲೂ ಬುದ್ಧಿಬಲದಿಂದಲೂ ಪಡೆದು ಬಂದಿದ್ದೇವೆ" ಎಂದರು.

ರಾಜನು ಅವರ ಕಾರ್ಯಕ್ಕೆ ಸಂತೋಷಪಟ್ಟು ದೊಡ್ಡ ಹಬ್ಬ ಮಾಡಿಸಿದನು. ಆ ಉಲ್ಲಾಸದ ಉತ್ಸವದಲ್ಲಿ ಎಲ್ಲರೂ ಭಾಗವಹಿಸಿದರು. ಆದರೆ ಕುದುರೆಯು ತಿನ್ನಲು ಇಷ್ಟಪಡಲಿಲ್ಲ. ಹಕ್ಕಿ ಹಾಡಲು ಬಾಯಿ ತೆರೆಯಲಿಲ್ಲ. ರಾಜಕುಮಾರಿಯಂತೂ ಸುಮ್ಮನೆ ಅಳುತ್ತ ಕೊಠಡಿಯಲ್ಲಿ ಕುಳಿತುಬಿಟ್ಟಳು.

ಮೂರನೆಯ ಮಗನನ್ನು ಅಣ್ಣಂದಿರು ಕಾಲುವೆಯ ಬಳಿ ಕೆಳಗೆ ತಳ್ಳಿದರಷ್ಟೆ. ಅವನು ಬಿದ್ದ ಕಡೆ ನೀರು ಹೆಚ್ಚಾಗಿರಲಿಲ್ಲ. ಆದರೂ ಅವನ ಮೂಳೆಗಳೆಲ್ಲ ಮುರಿದಹಾಗಾಯಿತು. ಅಲ್ಲದೆ, ಮೇಲೆ ಹತ್ತಿ ಬರುವುದಕ್ಕೆ ದಡವು ಬೇರೆ ಕಡಿದಾಗಿತ್ತು. ಏನು ಮಾಡಬೇಕೋ, ಅವನಿಗೆ ಗೊತ್ತಾಗಲಿಲ್ಲ. ತನ್ನ ಹಣೆಯಬರಹವೇ ಹೀಗೆಂದು ಗೋಳಾಡುತ್ತ ಕುಳಿತನು. ಆ ವೇಳೆಗೆ ಅವನ ಹಳೆಯ ಸ್ನೇಹಿತನಾದ ನರಿ ಬಂದು, ಅವನನ್ನು ನೋಡುತ್ತ ದಡದಲ್ಲಿ ಕುಳಿತುಕೊಂಡಿತು. ತಾನು ಹೇಳಿದ ಮಾತು ಕೇಳದೆ ತನ್ನ ಸಲಹೆಯನ್ನು ಮೂಲೆಗೆ ಒತ್ತಿದುದಕ್ಕಾಗಿ ಗದರಿಸಿಕೊಂಡಿತು. "ಆದರೂ, ನೀನು ತಿಳಿಗೇಡಿಯಾಗಿರುವುದರಿಂದ ನಾನು ನಿನ್ನನ್ನು ಇಲ್ಲಿ ಕೈಬಿಡಲಾಗದು. ಆದ್ದರಿಂದ, ಇದೊ, ಈ ನನ್ನ ಬಾಲವನ್ನು ಬಿಗಿಯಾಗಿ ಹಿಡಿ" ಎಂದಿತು. ತನ್ನ ಬಾಲದ ಬಲದಿಂದ ಅವನನ್ನು ದಡಕ್ಕೆ ಎಳೆಯಿತು. ಅವನು ದಡವನ್ನು ಮುಟ್ಟಿದ ಮೇಲೆ "ನೀನು ಹಿಂದಿರುಗುವುದನ್ನು ಕಂಡರೆ ನಿನ್ನ ಅಣ್ಣಂದಿರು ನಿನ್ನನ್ನು ಕೊಲ್ಲಲು ಯತ್ನಿಸುತ್ತಾರೆ. ಆದುದರಿಂದ ಒಬ್ಬ ಬಡ ಪೀಪಿಯೂದುವವನಂತೆ ವೇಷ ಮರೆಸಿಕೊಂಡು ರಾಜನ ಅರಮನೆಗೆ ಹೋಗು" ಎಂದು ಹೇಳಿಕೊಟ್ಟಿತು. ಅವನು ಹಾಗೆಯೆ ಹೋದನು. ಅವನು ಅರಮನೆಯ ಬಾಗಿಲಿಗೆ ಬರುವುದು ತಡ, ಕುದುರೆ ತಿನ್ನಲು ತೊಡಗಿತು, ಹಕ್ಕಿ ಹಾಡತೊಡಗಿತು, ರಾಜಕುಮಾರಿ ಅಳುವುದನ್ನು ನಿಲ್ಲಿಸಿಬಿಟ್ಟಳು.

ಅರಮನೆಯ ಅಂಗಳದಲ್ಲಿ ರಾಜನ ಪರಿವಾರದವರೆಲ್ಲರೂ ದೊಡ್ಡ ಹಬ್ಬ ಮಾಡುತ್ತಿದ್ದರು. ಮೂರನೆಯ ಮಗನು ಅಲ್ಲಿಗೆ ಬಂದನು. ನೆಟ್ಟನೆ ರಾಜನ ಸಮೀಪಕ್ಕೆ ಹೋಗಿ, ತನ್ನ ಅಣ್ಣಂದಿರ ಮೋಸವೆಲ್ಲವನ್ನೂ ಅವನಿಗೆ ತಿಳಿಸಿದನು. ರಾಜನು ಅವರ ಮೋಸಕ್ಕೆ ಕೋಪಗೊಂಡು ಅವರನ್ನು ಹಿಡಿದು ಶಿಕ್ಷಿಸಿದನು. ರಾಜಕುಮಾರಿಯನ್ನು ಪುನಃ ಮೂರನೆಯುವನಿಗೇ ಒಪ್ಪಿಸಿದನು. ಅವನು ಅವಳನ್ನು ಮದುವೆಯಾದನು. ರಾಜನು ಸತ್ತ ಬಳಿಕ ಅವನೇ ರಾಜನಾದನು.

ಮದುವೆಯಾದ ಮೇಲೆ ಒಂದು ದಿನ ಮೂರನೆಯ ಮಗನು ಕಾಡಿನಲ್ಲಿ ತಿರುಗಾಡಲು ಹೋದನು. ಅಲ್ಲಿ ಆ ಹಳೆಯ ನರಿ ಪುನಃ ಅವನ ಎದುರಿಗೆ ಬಂದಿತು. ಬಂದು, ಕಣ್ಣುತುಂಬ ನೀರು ತುಂಬಿಕೊಂಡು "ನನ್ನ ತಲೆಯನ್ನೂ ಬಾಲವನ್ನೂ ಕತ್ತರಿಸು" ಎಂದು ಬಹು ವಿಧದಿಂದ ಬೇಡಿಕೊಂಡಿತು. ಮೂರನೆಯ ಮಗನು ಮನಸ್ಸಿಲ್ಲದ ಮನಸ್ಸಿನಿಂದ ಅದರ ತಲೆಬಾಲಗಳನ್ನು ಕತ್ತರಿಸಿದನು. ಆ ಕ್ಷಣದಲ್ಲಿ ಆ ನರಿ ಒಬ್ಬ ರಾಜಕುಮಾರನಾಗಿ ಬದಲಾವಣೆ ಹೊಂದಿತು.

ಬಹಳ ವರ್ಷಗಳ ಹಿಂದೆ ಕಳೆದುಹೋಗಿದ್ದ ತನ್ನ ಸ್ವಂತ ಸಹೋದರನೇ ಅವನೆಂದು ರಾಜಕುಮಾರಿಗೆ ತಿಳಿಯಿತು. ಒಂದು ಹೊಟ್ಟೆಯ ಕಿಚ್ಚಿನ ದೇವತೆ "ನೀನು ನರಿಯಾಗು. ಯಾರಾದರೂ ಚಿನ್ನದ ಪಕ್ಷಿಯನ್ನು ಸಂಪಾದಿಸಿ ನಿನ್ನ ತಲೆಬಾಲಗಳನ್ನು ಕತ್ತರಿಸಿದರೆ, ನೀನು ಪುನಃ ರಾಜಕುಮಾರನಾಗು" ಎಂದು ಮಂತ್ರಿಸಿತ್ತು. ಮೂರನೆಯ ಮಗನು ಆ ಮಂತ್ರವನ್ನು ಮುರಿದನು.

ಆ ಮೇಲೆ ಎಲ್ಲರೂ ಸುಖದಿಂದಿದ್ದರು.

## ೨. ಇಬ್ಬರು ಸಹೋದರರು

ಹಿಂದೆ ಇಬ್ಬರು ಸಹೋದರರು ಇದ್ದರು. ಅವರಲ್ಲಿ ಅಣ್ಣನು ಬಹಳ ಹಣವಂತ, ತಮ್ಮನು ತೀರ ಬಡವ. ಆ ಹಣವಂತ ತುಂಬ ಕೆಟ್ಟವನು, ಬಡವನು ಬಹಳ ಒಳ್ಳೆಯವನು. ಅಣ್ಣನು ಅಕ್ಕಸಾಲೆಯ ಕೆಲಸ ಮಾಡುತ್ತಿದ್ದ. ತಮ್ಮನು ಕಸಬರಿಗೆಗಳನ್ನು ಕಟ್ಟಿ ಮಾರುತ್ತಿದ್ದ.

ಬಡತಮ್ಮನಿಗೆ ಇಬ್ಬರು ಅವಳಿಮಕ್ಕಳು. ಆ ಮಕ್ಕಳು ತಮ್ಮ ದೊಡ್ಡಪ್ಪನ ಮನೆಗೂ ಹೋಗುತ್ತಿದ್ದರು, ಅವರು ತಟ್ಟೆಯಲ್ಲಿ ತಿಂದು ಮಿಕ್ಕುದನ್ನು ತಿಂದು ಬರುತ್ತಿದ್ದರು.

ಒಂದು ದಿನ ಬಡತಮ್ಮನು ಪೊರಕೆಕಡ್ಡಿಗಳನ್ನು ಆರಿಸಲು ಕಾಡಿಗೆ ಹೋದಾಗ, ಅಲ್ಲಿ, ಹಿಂದೆ ಎಂದೂ ಕಾಣದೆ ಇದ್ದಂಥ ಒಂದು ಸೊಗಸಾದ ಹಕ್ಕಿಯನ್ನು ನೋಡಿದನು. ಅದರ ಕಡೆಗೆ ಒಂದು ಸಣ್ಣ ಕಲ್ಲು ಹೊಡೆದನು. ಆದರೆ ಹಕ್ಕಿ ಬೀಳಲಿಲ್ಲ, ಅದರ ಒಂದು ಗರಿ ಮಾತ್ರ ಬಿತ್ತು. ಹಕ್ಕಿ ಹಾರಿಹೋಯಿತು. ಅವನು ಆ ಗರಿಯನ್ನು ಎತ್ತಿಕೊಂಡನು. ಅದು ಚಿನ್ನದ ಗರಿಯಾಗಿತ್ತು. ಅದನ್ನು ತನ್ನ ಅಣ್ಣನ ಹತ್ತಿರ ತೆಗೆದುಕೊಂಡುಹೋದನು. ಅಣ್ಣನು ಅದನ್ನು ಪರೀಕ್ಷೆಮಾಡಿ, ಅದು ಒಳ್ಳೆಯ ಚಿನ್ನವೆಂದು ತಿಳಿದು ಅವನಿಗೆ ಹಣಕೊಟ್ಟು ಕಳುಹಿಸಿದನು.

ಮರುದಿವಸ ಬೆಳಗ್ಗೆ ಬಡತಮ್ಮನು ಕಾಡಿನಲ್ಲಿ ಒಂದು ಮರದ ರೆಂಬೆಗಳನ್ನು ಕತ್ತರಿಸುತ್ತಿರುವಾಗ ಅದೇ ಪಕ್ಷಿ ಅವನ ಮುಂದೆ ಹಾದು ಹೋಯಿತು. ಅವನು ಅದನ್ನು ಹುಡುಕುತ್ತಾ ಹೋದನು. ಒಂದು ಚಿನ್ನದ ಮೊಟ್ಟೆ ಇಟ್ಟಿದ್ದ ಗೂಡು ಸಿಕ್ಕಿತು. ತಮ್ಮನು ಆ ಮೊಟ್ಟೆಯನ್ನು ತೆಗೆದುಕೊಂಡು ಹೋಗಿ ಅಣ್ಣನಿಗೆ ತೋರಿಸಿದನು. ಅವನು ಅದು ಒಳ್ಳೆಯ ಚಿನ್ನವೆಂದು ಕಂಡುಕೊಂಡು ಪುನಃ ಅವನಿಗೆ ಹಣಕೊಟ್ಟು ಕಳುಹಿಸಿದನು. ಕಳುಹಿಸುವಾಗ "ಈ ಗರಿ, ಮೊಟ್ಟೆ ಮಾತ್ರ ತಂದರೆ ಸಾಲದು. ನನಗೆ ಆ ಹಕ್ಕಿಯೇ ಬೇಕು" ಎಂದನು.

ತಮ್ಮನು ಪುನಃ ಕಾಡಿಗೆ ಹೋದನು. ಹಕ್ಕಿ ಈ ಸಲ ಮರದ ಮೇಲೆ ಕುಳಿತಿತ್ತು. ಅವನು ಅದರ ಕಡೆಗೆ ಕಲ್ಲು ಎಸೆದನು. ಹಕ್ಕಿ

ಕೆಳಗೆ ಬಿತ್ತು. ತಮ್ಮನು ಅದನ್ನು ಕೊಂಡುಹೋಗಿ ಅಣ್ಣನಿಗೆ ಕೊಟ್ಟನು. ಅಣ್ಣನು ಅವನಿಗೆ ದೊಡ್ಡ ಹಣದ ರಾಶಿಯನ್ನು ಕೊಟ್ಟು ಆ ಹಕ್ಕಿಯನ್ನು ತೆಗೆದುಕೊಂಡನು. ಬಡ ಕಸಬರಿಗೆಯವನು ಸಂತೋಷಪಡುತ್ತ "ಇನ್ನು ನಾನು ಅಭಿವೃದ್ಧಿಯಾಗಬಹುದು" ಎಂದು ಮನೆಗೆ ಹೋದನು.

ಅಕ್ಕಸಾಲೆಯಲ್ಲಿ ಬುದ್ಧಿ ಮಾತ್ರವಲ್ಲ, ಮೋಸವೂ ತುಂಬಿತ್ತು. ತಾನು ಪಡೆದ ಹಕ್ಕಿ ಎಂತಹದೆಂಬುದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಅವನು ತನ್ನ ಹೆಂಡತಿಯನ್ನು ಕರೆದು, "ಈ ಹಕ್ಕಿಯ ಒಂದು ಚೂರೂ ಹಾಳಾಗದ ಹಾಗೆ ಇದನ್ನು ತುಪ್ಪದಲ್ಲಿ ಕರಿ. ಆ ಮೇಲೆ ಬಂದು ನಾನು ಒಬ್ಬನೇ ಇದನ್ನು ತಿನ್ನುತ್ತೇನೆ" ಎಂದು ಹೇಳಿದನು. ಆ ಹಕ್ಕಿ ಸಾಧಾರಣ ಹಕ್ಕಿಯಲ್ಲ. ಅದರ ಹೃದಯವನ್ನೂ ಪಿತ್ತಕೋಶವನ್ನೂ ಯಾರಾದರೂ ತಿಂದರೆ, ಅವರ ತಲೆದಿಂಬಿನ ಕೆಳಗೆ ಎರಡು ಚಿನ್ನದ ಬಿಲ್ಲೆ ಪ್ರತಿದಿನ ಬೆಳಗ್ಗೆ ಸಿಕ್ಕುತ್ತಿತ್ತು. ಅಂತಹ ಹಕ್ಕಿ ಅದು!

ಮನೆಯಾಕೆ ಹಕ್ಕಿಯನ್ನು ಕರಿದಳು. ಗರಿಗರಿಯಾಗಲೆಂದು ಅದನ್ನು ಒಂದು ಸಲಾಕಿಗೆ ಚುಚ್ಚಿ, ಬೆಂಕಿಯ ಮುಂದೆ ಇಟ್ಟು, ಬೇರೆಯ ಕೆಲಸದ ಮೇಲೆ ಅಡುಗೆಯ ಮನೆಯಿಂದ ಆಚೆ ಹೋದಳು. ಅವಳು ಅಲ್ಲಿ ಇಲ್ಲದಿದ್ದಾಗ ಬಡಕಸಬರಿಗೆಯವನ ಇಬ್ಬರು ಅವಳಿಮಕ್ಕಳು ಒಳಗೆ ಬಂದರು, ಒಲೆಯ ಮುಂದೆ ಇದ್ದ ಸಲಾಕಿಯನ್ನು ತಿರುಗಿಸತೊಡಗಿದರು. ಹಾಗೆ ತಿರುಗಿಸುವಾಗ ಆ ಹಕ್ಕಿಯ ಮೈಯಿಂದ ಏನೋ ಎರಡು ಚೂರು ಕೆಳಗೆ ಬಿತ್ತು. ಆ ಮಕ್ಕಳಲ್ಲಿ ಒಬ್ಬನು "ಈ ಎರಡು ಚೂರನ್ನೂ ನಾವು ತಿನ್ನೋಣ. ನನಗೆ ಬಹಳ ಹಸಿವಾಗಿದೆ. ಎರಡು ಚಿಕ್ಕ ಚೂರು ತಾನೆ, ಯಾರಿಗೂ ಗೊತ್ತಾಗುವುದಿಲ್ಲ" ಎಂದನು. ಇಬ್ಬರೂ ಆ ಚೂರುಗಳನ್ನು ತಿಂದುಬಿಟ್ಟರು.

ಆ ವೇಳೆಗೆ ಸರಿಯಾಗಿ ಮನೆಯಾಕೆ ಅಲ್ಲಿಗೆ ಬಂದಳು. ಅವರು ಬಾಯಾಡಿಸುವುದನ್ನು ಕಂಡು, ಏನು ತಿಂದಿರೆಂದು ಕೇಳಿದಳು. ಹಕ್ಕಿಯಿಂದ ಬಿದ್ದ ಎರಡು ಚೂರುಗಳನ್ನು ಅವರು ತಿಂದರೆಂದು ಕೇಳಿ, ಆಕೆಗೆ ಹೆದರಿಕೆಯಾಯಿತು. ಅವರು ಹೃದಯ ಪಿತ್ತಕೋಶಗಳನ್ನು ತಿಂದದ್ದು ತನ್ನ ಗಂಡನಿಗೆ ತಿಳಿಯಬಾರದೆಂದು, ಕೂಡಲೆ ಒಂದು ಕೋಳಿಯನ್ನು ಕೊಂದು

ಅದರ ಹೃದಯವನ್ನೂ ಪಿತ್ತಕೋಶವನ್ನೂ ಆ ಹಕ್ಕಿಯ ಹೊಟ್ಟೆಯಲ್ಲಿ ಮುಚ್ಚಿಟ್ಟಳು.

ಅಕ್ಕಸಾಲೆಯು ಮನೆಗೆ ಬಂದೊಡನೆಯೇ ಒಂದು ಚೂರೂ ಬಿಡದೆ ಹಕ್ಕಿಯೆಲ್ಲವನ್ನೂ ತಾನೊಬ್ಬನೇ ತಿಂದು ಮುಗಿಸಿದನು. ಮಾರನೆಯ ಬೆಳಗ್ಗೆ ಚಿನ್ನದ ನಾಣ್ಯವನ್ನು ಹೊಂದುವೆನೆಂಬ ಆಸೆಯಿಂದ ದಿಂಬಿನ ಕೆಳಗೆ ಹುಡುಕಿದನು. ಅವನಿಗೆ ನಾಣ್ಯ ಸಿಕ್ಕಲಿಲ್ಲ.

ಅತ್ತ, ಬಡತಮ್ಮನ ಮಕ್ಕಳು ತಮಗೆ ಸಂಭವಿಸಿದ ಅದೃಷ್ಟವನ್ನು ಅರಿಯದೆ ಇದ್ದರು. ಮಾರನೆಯ ಬೆಳಗ್ಗೆ ಅವರು ಹಾಸಿಗೆಯಿಂದ ಏಳುವಾಗ ಝಣ್ಣೆಂದು ಶಬ್ದಮಾಡುತ್ತ ಏನೋ ನೆಲದ ಮೇಲೆ ಬಿದ್ದಿತು. ಅವರು ಅದೇನೆಂದು ನೋಡಿದರು. ಎರಡು ಚಿನ್ನದ ನಾಣ್ಯ ಸಿಕ್ಕಿತು. ಅದನ್ನು ಅವರು ತಂದೆಗೆ ತಂದು ತೋರಿಸಿದರು. ಅವನಿಗೂ ಅದು ಅರ್ಥವಾಗಲಿಲ್ಲ, ಹೆದರಿಕೆಯಾಯಿತು.

ಹೀಗೆಯೇ ಪ್ರತಿದಿನ ಬೆಳಗ್ಗೆ ಚಿನ್ನದ ನಾಣ್ಯಗಳು ದೊರಕುತ್ತಿರಲು, ಬಡತಮ್ಮನು ಆ ಆಶ್ಚರ್ಯವನ್ನು ಅಣ್ಣನಿಗೆ ತಿಳಿಸಿದನು. ಆಗ ಅಕ್ಕಸಾಲೆ ಏನು ನಡೆದಿರಬೇಕೆಂಬುದನ್ನು ಊಹಿಸಿದನು. ಆ ಹುಡುಗರು ಹೇಗೋ ಹಕ್ಕಿಯ ಹೃದಯ ಪಿತ್ತಕೋಶಗಳನ್ನು ತಿಂದಿರಬೇಕೆಂದು ತಿಳಿದನು. ಅವನಿಗೆ ಮೊದಲೇ ಕೆಟ್ಟಮನಸ್ಸು, ಹೊಟ್ಟೆಯ ಕಿಚ್ಚು. ಈಗಂತೂ ಆ ಮಕ್ಕಳ ಮೇಲೆ ಅವನಿಗೆ ದ್ವೇಷವೇ ಹುಟ್ಟಿತು. ಆಗ ತನ್ನ ಹಗೆಯನ್ನು ತೀರಿಸಿಕೊಳ್ಳುವುದಕ್ಕಾಗಿ “ನಿನ್ನ ಮಕ್ಕಳಿಗೆ ಪಿಶಾಚಿ ಮೆಟ್ಟಿಕೊಂಡಿದೆ. ಆ ಪಿಶಾಚಿಯೇ ಹೀಗೆ ದಿಂಬಿನ ಕೆಳಗೆ ನಾಣ್ಯಗಳನ್ನು ಇಡುತ್ತಿದೆ. ನೀನು ಆ ನಾಣ್ಯಗಳನ್ನು ಮುಟ್ಟಬೇಡ, ಈ ಮಕ್ಕಳನ್ನೂ ಮನೆಯಲ್ಲಿಟ್ಟುಕೊಳ್ಳಬೇಡ. ಪಿಶಾಚಿ ನಿನ್ನನ್ನು ಕೂಡ ಕಾಡಬಹುದು” ಎಂದು ತಮ್ಮನನ್ನು ಹೆದರಿಸಿದನು. ತಮ್ಮನೂ ಹೆದರಿಕೊಂಡು, ಮನಸ್ಸಿನಲ್ಲಿಯೇ ಕೊರಗುತ್ತ ಮಕ್ಕಳನ್ನು ಕಾಡಿನಲ್ಲಿ ದೂರವಾಗಿ ಕರೆದುಕೊಂಡುಹೋಗಿ ಬಿಟ್ಟುಬಂದನು.

ಮನೆಯ ದಾರಿಯನ್ನು ಕಾಣದೆ, ಪಾಪ, ಆ ಮಕ್ಕಳು ಕಾಡಿನಲ್ಲಿ ಸುಮ್ಮನೆ ಸುತ್ತಾಡಿದರು. ಸುತ್ತಿದಷ್ಟೂ ದಾರಿ ತಪ್ಪಿದರು, ಇನ್ನೂ

ಕಾಡಿನ ಒಳಕ್ಕೆ ಹೋದರು. ಅಲ್ಲಿ ಒಬ್ಬ ಬೇಟೆಗಾರನು ಅವರನ್ನು ಕಂಡು, “ ನೀವು ಯಾರ ಮಕ್ಕಳು ? ” ಎಂದು ಕೇಳಿದನು.

“ ನಾವು ಒಬ್ಬ ಬಡ ಕಸಬರಿಗೆಮಾಡುವವನ ಮಕ್ಕಳು. ಪ್ರತಿ ದಿನ ಬೆಳಗ್ಗೆ ತಮ್ಮ ತಲೆದಿಂಬಿನ ಕೆಳಗೆ ಚಿನ್ನದ ನಾಣ್ಯಗಳು ಸಿಕ್ಕುತ್ತಿದ್ದುದರಿಂದ ನಮ್ಮ ತಂದೆ ನಮ್ಮನ್ನು ಕಾಡಿನಲ್ಲಿ ಬಿಟ್ಟುಹೋದನು ” ಎಂದರು.

ಅದಕ್ಕೆ ಆ ಬೇಟೆಗಾರನು “ ಪ್ರತಿದಿನ ಬೆಳಗ್ಗೆ ತಲೆದಿಂಬಿನ ಕೆಳಗೆ ಚಿನ್ನದ ನಾಣ್ಯ ಸಿಕ್ಕುವುದರಿಂದ ಏನೂ ಕೇಡಾಗುವುದಿಲ್ಲ. ಆದರೆ ಆ ಹಣವನ್ನು ಒಳ್ಳೆಯ ಮಾರ್ಗದಲ್ಲಿ ಉಪಯೋಗಿಸಬೇಕು. ಹಣ ಸಿಕ್ಕಿತೆಂದು ಸೋಮಾರಿಗಳಾಗಬಾರದು. ಅಷ್ಟೆ” ಎಂದು ಹೇಳಿ, ತನಗೆ ಸ್ವಂತ ಮಕ್ಕಳಿಲ್ಲದುದರಿಂದ ತಾನು ಅವರಿಗೆ ತಂದೆಯಾಗುವೆನೆಂದು ಹೇಳಿ, ಅವರನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಅಲ್ಲಿ ಅವರಿಗೆ ಬೇಟೆಗಾರರು ತಿಳಿದಿರಬೇಕಾದುದೆಲ್ಲವನ್ನೂ ಕಲಿಸಿದನು. ಅವರಿಗೇ ಮುಂದೆ ಬೇಕಾಗುವುದೆಂದು, ಅವರ ತಲೆದಿಂಬಿನ ಕೆಳಗೆ ಕಾಣುತ್ತಿದ್ದ ಹಣವನ್ನು ಒಂದು ಕಡೆ ಕೂಡಿಟ್ಟನು.

ಆ ಮಕ್ಕಳಿಬ್ಬರೂ ಬೆಳೆದು ದೊಡ್ಡವರಾದರು. ಆಗ ಒಂದು ದಿನ ಅವರ ಸಾಕುತಂದೆ ಅವರನ್ನು ಕಾಡಿಗೆ ಕರೆದುಕೊಂಡುಹೋದನು. ಅವರು ಬೇಟೆಗಾರ ವೃತ್ತಿಯನ್ನು ಎಷ್ಟುಮಟ್ಟಿಗೆ ಕಲಿತಿರುವರೊ ಪರೀಕ್ಷಿಸಬೇಕೆಂದು ಅವನಿಗೆ ಮನಸ್ಸಿತ್ತು. ಅವನ ಆಜ್ಞೆಯಂತೆ ಅವರಿಬ್ಬರೂ ಬಾಣ ಬಿಡಲು ಸಿದ್ಧರಾಗಿ ನಿಂತರು. ಬಾಣ ಬಿಡುವುದಕ್ಕೆ ಗುರಿ ಯಾವುದೂ ಕಾಣಲಿಲ್ಲ. ಕೊನೆಗೆ ಹಂಸಗಳ ಒಂದು ಗುಂಪು ತ್ರಿಕೋಣಾಕಾರದಲ್ಲಿ ಮೇಲೆ ಹಾರುತ್ತಿದ್ದುದು ಕಂಡುಬಂದಿತು. ಆಗ ಬೇಟೆಗಾರನು ಒಬ್ಬನನ್ನು ಕುರಿತು, “ ಈ ಗುಂಪಿನ ಒಂದೊಂದು ಮೂಲೆಯಿಂದ ಒಂದೊಂದು ಹಂಸವನ್ನು ಹೊಡೆ” ಎಂದನು. ಯುವಕನು ಹಾಗೆಯೆ ಹೊಡೆದು ಜಯಪಡೆದನು. ಕೆಲವು ನಿಮಿಷಗಳು ಕಳೆದ ಮೇಲೆ ಇನ್ನೊಂದು ಹಂಸಗಳ ಗುಂಪು ‘2’ ಅಂಕೆಯ ಆಕಾರದಲ್ಲಿ ಮೇಲೆ ಹಾರಿಬಂತು. ಬೇಟೆಗಾರನು ಇನ್ನೊಬ್ಬ ಸಹೋದರನಿಗೂ

ಹಾಗೆಯೆ ಆಜ್ಞೆಮಾಡಿದನು. ಅವನೂ ಒಂದೊಂದು ಕೊನೆಯಿಂದ ಒಂದೊಂದು ಹಂಸವನ್ನು ಇಳಿಸಿ ಜಯಶೀಲನಾದನು.

ಅನಂತರ ಆ ಇಬ್ಬರು ಸೋದರರೂ ಕಾಡಿಗೆ ಹೋಗಿ ತಾವು ಮುಂದೆ ಏನು ಮಾಡಬೇಕೆಂಬುದನ್ನು ಆಲೋಚಿಸಿದರು. ಆ ರಾತ್ರಿ ಊಟಕ್ಕೆ ಕುಳಿತಾಗ ತಮ್ಮ ಸಾಕುತಂದೆಯ ಹತ್ತಿರ "ನಮ್ಮ ಬಿನ್ನಹವನ್ನು ನೀನು ಕೇಳಬೇಕು. ನೀನು ಕೇಳುವವರೆಗೂ ಒಂದು ತುತ್ತು ಅನ್ನವನ್ನೂ ನಾವು ಮುಟ್ಟುವುದಿಲ್ಲ" ಎಂದರು.

"ನಿಮ್ಮ ಬಿನ್ನಹವೇನು?" ಎಂದು ಬೇಟೆಗಾರನು ಕೇಳಿದನು.

"ನಾವು ಬೇಟೆಯಾಡುವುದರಲ್ಲಿ ಪಂಡಿತರಾಗಿದ್ದೇವೆ. ಲೋಕದಲ್ಲಿ ಸಂಚಾರಮಾಡಿ ಅನುಭವ ಪಡೆಯಲು ನಮಗೆ ಅಪ್ಪಣೆಕೊಡಬೇಕು" ಎಂದು ಆ ಸೋದರರು ಕೇಳಿಕೊಂಡರು.

"ನೀವು ಹುಟ್ಟು ಬೇಟೆಗಾರರಂತೆ ಮಾತನಾಡುತ್ತಿದ್ದೀರಿ. ನಿಮ್ಮ ಇಷ್ಟವೇ ನನ್ನ ಇಷ್ಟ. ಮುಂದೆ ನಿಮಗೆ ಒಳ್ಳೆಯದಾಗಲಿ" ಎಂದು ಆ ಮುದಿ ಬೇಟೆಗಾರನು ಸಂತೋಷದಿಂದ ಅಪ್ಪಣೆ ಕೊಟ್ಟನು.

ಆ ಸಹೋದರರಿಗೂ ಸಂತೋಷವಾಯಿತು.

ಆ ಸಹೋದರರು ತಮ್ಮ ಸಾಕುತಂದೆಯನ್ನು ಅಗಲುವ ದಿವಸ ಬಂತು. ಆಗ ಅವನು ಅವರಿಬ್ಬರಿಗೂ ಒಂದೊಂದು ಒಳ್ಳೆಯ ತುಪಾಕಿಯನ್ನು ಕೊಟ್ಟು ಅವರಿಗೆಂದೇ ಕೂಡಿಟ್ಟಿದ್ದ ಹಣದಿಂದ ಬೇಕಾದಷ್ಟನ್ನು ತೆಗೆದುಕೊಳ್ಳಲು ಅಪ್ಪಣೆ ಕೊಟ್ಟನು. ಅವರ ಸಂಗಡ ಕೊಂಚ ದೂರ ಹೋಗಿ, ಅವರನ್ನು ಕಳುಹಿಸಿಕೊಡುವ ಮೊದಲು ಅವರಿಗೆ ಒಂದು ಹೊಳೆ ಹೊಳೆಯುವ ಚಾಕುವನ್ನು ಕೊಟ್ಟನು. ಕೊಟ್ಟು, "ಮುಂದೆ ನೀವು ಒಬ್ಬರನ್ನು ಒಬ್ಬರು ಅಗಲಬೇಕಾಗಿ ಬಂದಾಗ, ಅಗಲುವ ಕವಲುದಾರಿಯಲ್ಲಿರುವ ಮರಕ್ಕೆ ಈ ಚಾಕುವನ್ನು ತೂಗುಹಾಕಿರಿ. ನಿಮ್ಮಲ್ಲಿ ಯಾರಿಗಾದರೂ ಇನ್ನೊಬ್ಬನ ಯೋಗಕ್ಷೇಮವನ್ನು ತಿಳಿಯಬೇಕೆನ್ನಿಸಿದರೆ, ಅವನು ಹೋದ ಕಡೆಗಿರುವ ಅಲಗಿನ ಮುಖವನ್ನು ನೋಡಿರಿ. ಅವನು

ಸತ್ತುಹೋಗಿದ್ದರೆ, ಅಲಗು ತುಕ್ಕು ಹಿಡಿದಿರುತ್ತದೆ. ಅವನು ಬದುಕಿದ್ದರೆ ಅಲಗು ಹೊಳೆಹೊಳೆಯುತ್ತಿರುತ್ತದೆ" ಎಂದು ಹೇಳಿದನು.

ಅನಂತರ ಆ ಸೋದರರು ಹೊರಟರು. ಒಂದು ದೊಡ್ಡ ಕಾಡಿಗೆ ಬಂದರು. ತಮ್ಮ ಚೀಲದಲ್ಲಿ ತಂದಿದ್ದುದನ್ನೇ ತಿಂದು ರಾತ್ರಿ ಅಲ್ಲಿಯೇ ತಂಗಿದರು. ಮಾರನೆಯ ದಿವಸ ಕೂಡ ಅವರು ಕಾಡನ್ನು ದಾಟಲು ಆಗಲಿಲ್ಲ. ತಂದಿದ್ದ ಆಹಾರ ತೀರಿಹೋದುದರಿಂದ ಅವರು ಬೇಟೆಯಾಡಬೇಕಾಯಿತು. ಸೋದರರಲ್ಲಿ ಒಬ್ಬನು ತುಪಾಕಿಯನ್ನು ಎತ್ತಿ ಒಂದು ಮುದಿಮೊಲಕ್ಕೆ ಹೊಡೆಯಲು ಗುರಿಯಿಟ್ಟನು.

"ಅಯ್ಯಾ, ಅಯ್ಯಾ, ಬೇಟೆಗಾರ, ನನ್ನನ್ನು ಕೊಲ್ಲಬೇಡ. ನನ್ನ ಎರಡು ಚಿಕ್ಕಮರಿಗಳನ್ನು ಕೊಡುತ್ತೇನೆ" ಎಂದು ಆ ಮೊಲ ಕೂಗಿಕೊಂಡು ಪಕ್ಕದ ಪೊದೆಗೆ ಹಾರಿ ತನ್ನ ಎರಡು ಮರಿಗಳನ್ನು ತಂದು ಒಪ್ಪಿಸಿತು. ಆದರೆ ಆ ಮರಿಗಳು ಮುದ್ದಾಗಿ ಕುಣಿದಾಡುವುದನ್ನು ಕಂಡು, ಆ ಸಹೋದರರಿಗೆ ಅದನ್ನು ಕೊಲ್ಲಲು ಮನಸ್ಸು ಬರಲಿಲ್ಲ. ಆ ಮರಿಗಳನ್ನು ಹಿಂದೆ ಕರೆದುಕೊಂಡು ಅವರು ಮುಂದೆ ಹೋದರು.

ದಾರಿಯಲ್ಲಿ ಒಂದು ನರಿ ಅಡ್ಡ ಬಂದಿತು. ಅದನ್ನು ಕೊಲ್ಲಬೇಕೆಂದು ಕೋವಿಯೆತ್ತಿದಾಗ, "ಅಯ್ಯಾ ಬೇಟೆಗಾರರೇ, ನನ್ನನ್ನು ಕೊಲ್ಲಬೇಡಿ. ನನ್ನ ಎರಡು ಮರಿಗಳನ್ನು ಕೊಡುತ್ತೇನೆ" ಎಂದು ಆ ನರಿ ತನ್ನೆರಡು ಮರಿಗಳನ್ನು ತಂದೊಪ್ಪಿಸಿತು. ಅವುಗಳನ್ನು ಕೊಲ್ಲುವುದಕ್ಕೂ ಆ ಸೋದರರಿಗೆ ಮನಸ್ಸು ಬರಲಿಲ್ಲ. ಮೊಲಗಳ ಜೊತೆಯಲ್ಲಿ ಅವುಗಳನ್ನೂ ಕರೆದುಕೊಂಡು ಹೋದರು.

ದಾರಿಯಲ್ಲಿ, ಪೊದೆಯಿಂದ ಒಂದು ತೋಳ ಹೊರಗೆ ಹಾರಿತು. ಸೋದರರು ಅದಕ್ಕೆ ಗುರಿಯಿಟ್ಟೊಡನೆ ಅದು "ಅಯ್ಯಾ, ಅಯ್ಯಾ, ನನ್ನನ್ನು ಕೊಲ್ಲಬೇಡಿ. ನನ್ನ ಎರಡು ಮರಿಗಳನ್ನು ಕೊಡುತ್ತೇನೆ" ಎಂದು ತನ್ನ ಎರಡು ಚಿಕ್ಕಮರಿಗಳನ್ನು ತಂದು ಒಪ್ಪಿಸಿತು. ಅವರಿಗೆ ಅವುಗಳನ್ನು ಕೊಲ್ಲಲೂ ಮನಸ್ಸು ಬರಲಿಲ್ಲ. ಮಿಕ್ಕ ಪ್ರಾಣಿಗಳ ಜೊತೆಗೆ ಆ ಚಿಕ್ಕ ತೋಳಗಳನ್ನೂ ಕರೆದುಕೊಂಡು ಹೋದರು.

ಮುಂದೆ ಒಂದು ಕರಡಿ ಕಾಣಿಸಿಕೊಂಡಿತು. ಅದು ಕೂಡ ಅವರು ತನ್ನ ಕಡೆಗೆ ತುಪಾಕಿ ತಿರುಗಿಸಿದುದನ್ನು ಕಂಡು "ಅಯ್ಯಾ, ಅಯ್ಯಾ, ನನ್ನನ್ನು ಜೀವದೊಂದಿಗೆ ಬಿಟ್ಟರೆ ನನ್ನ ಎರಡು ಕರಡಿ ಮರಿಗಳನ್ನು ಕೊಡುತ್ತೇನೆ" ಎಂದು, ತಂದು ಒಪ್ಪಿಸಿತು. ಉಳಿದ ಆರು ಪ್ರಾಣಿಗಳ ಜೊತೆಯಲ್ಲಿ ಆ ಕರಡಿಮರಿಗಳೂ ಆ ಸೋದರರನ್ನು ಹಿಂಬಾಲಿಸಿದುವು.

ಕಟ್ಟಕಡೆಗೆ ಬಾಲವಾಡಿಸುತ್ತ ಒಂದು ಸಿಂಹ ಬಂದಿತು. ಆ ಸೋದರರು ಭಯಪಡದೆ ಅದನ್ನು ಕೊಲ್ಲಲು ಯತ್ನಿಸಿದಾಗ, ಅದು ಕೂಡ ತನ್ನೆರಡು ಮರಿಗಳನ್ನು ತಂದು ಒಪ್ಪಿಸಿ ತನ್ನ ಜೀವ ಉಳಿಸಿಕೊಂಡಿತು. ಹೀಗೆ, ಎರಡು ಮರಿಸಿಂಹ, ಎರಡು ಮರಿಕರಡಿ, ಎರಡು ಮರಿತೋಳ, ಎರಡು ಮರಿನರಿ, ಎರಡು ಮರಿಮೊಲಗಳನ್ನು ಹಿಂದೆ ಕರೆದುಕೊಂಡು ಆ ಸೋದರರು ಮುಂದೆ ಹೋದರು.

ಆ ಸೋದರರಿಗೆ ಹಸಿವು ಇನ್ನೂ ಹೆಚ್ಚಾಗಿತ್ತು. ಅವರು ತಮ್ಮೊಡನೆ ಬಂದ ನರಿಗಳನ್ನು ಕುರಿತು "ನೀವು ಜಾಣನರಿಗಳು. ನಮಗೆ ತಿನ್ನಲು ಏನನ್ನಾದರೂ ತರುವಿರ?" ಎಂದು ಕೇಳಿದರು. ಅದಕ್ಕೆ ಆ ನರಿಗಳು "ಇಲ್ಲಿಗೆ ಸಮೀಪದಲ್ಲಿ ಒಂದು ಹಳ್ಳಿಯಿದೆ. ಅಲ್ಲಿ ನಾವು ಎಷ್ಟೋ ಸಣ್ಣ ಕೋಳಿಗಳನ್ನು ಕದ್ದಿದ್ದೇವೆ. ಆ ಹಳ್ಳಿಗೆ ನಾವು ದಾರಿ ತೋರಿಸಬಲ್ಲೆವು" ಎಂದುವು. ಅದರಂತೆ ಆ ಸೋದರರು ಆ ಹಳ್ಳಿಗೆ ಹೋಗಿ, ತಮಗೂ ತಮ್ಮ ಜೊತೆಯ ಪ್ರಾಣಿಗಳಿಗೂ ಬೇಕಾದ ಆಹಾರವನ್ನು ಕೊಂಡುಕೊಂಡು ಮುಂದೆ ಸಾಗಿದರು. ನರಿಗಳಿಗೆ ಕೋಳಿ ಕದ್ದೂ ಕದ್ದೂ ಸುತ್ತಮುತ್ತಲೂ ಆಹಾರ ಸಿಕ್ಕುವ ಸ್ಥಳಗಳೆಲ್ಲ ಚೆನ್ನಾಗಿ ತಿಳಿದಿತ್ತು. ಅವುಗಳಿಂದ ಆ ಸೋದರರಿಗೆ ಬಹಳ ಉಪಯೋಗವಾಯಿತು.

ಅವರಿಬ್ಬರೂ ಹೀಗೆಯೇ ಕೆಲಕಾಲ ಸುತ್ತಾಡಿದರು. ಇಬ್ಬರಿಗೂ ಏನೂ ಕೆಲಸ ದೊರಕಲಿಲ್ಲ. "ಇನ್ನೇನು ಮಾಡುವುದು? ಇಬ್ಬರೂ ನಮ್ಮ ನಮ್ಮ ದಾರಿ ಹಿಡಿಯೋಣ" ಎಂದು ಅವರು ಆ ಸಿಂಹ, ಕರಡಿ, ತೋಳ, ನರಿ, ಮೊಲಗಳಲ್ಲಿ ಒಂದೊಂದನ್ನು ಸಮನಾಗಿ ಹಂಚಿಕೊಂಡರು. ಬಳಿಕ ಒಬ್ಬರಿಗೊಬ್ಬರು ನಮಸ್ಕಾರ ಮಾಡಿದರು. ಸಾಯುವವರೆಗೂ ಒಬ್ಬರನ್ನೊಬ್ಬರು ಪ್ರೀತಿಸುವುದಾಗಿ ಪ್ರಮಾಣಮಾಡಿದರು. ಅನಂತರ

ತಮ್ಮ ಸಾಕುತಂದೆ ಕೊಟ್ಟ ಚಾಕುವನ್ನು ಆ ಕವಲುದಾರಿಯ ಮರಕ್ಕೆ ನೇತುಹಾಕಿದರು. ಆಮೇಲೆ ಒಬ್ಬನು ಪೂರ್ವಕ್ಕೆ ಹೋದನು, ಇನ್ನೊಬ್ಬನು ಪಶ್ಚಿಮಕ್ಕೆ ಹೋದನು.

ಅವರಿಬ್ಬರಲ್ಲಿ ಚಿಕ್ಕವನು ತನ್ನ ಪ್ರಾಣಿಗಳನ್ನು ಕರೆದುಕೊಂಡು ಒಂದು ಪಟ್ಟಣಕ್ಕೆ ಬಂದನು. ಅಲ್ಲೆಲ್ಲಿ ನೋಡಿದರೂ ಕಪ್ಪು ಬಟ್ಟೆಗಳನ್ನು ತೂಗುಹಾಕಿದ್ದರು. ಚಿಕ್ಕವನು ಅಲ್ಲಿ ಒಂದು ಛತ್ರದಲ್ಲಿ ಇಳಿದನು. ತನಗೂ ತನ್ನ ಪ್ರಾಣಿಗಳಿಗೂ ಸ್ಥಳ ಕೇಳಿದನು. ಛತ್ರದ ಯಜಮಾನನು ಆ ಪ್ರಾಣಿಗಳಿಗೆ ಒಂದು ಕೊಟ್ಟಿಗೆಯಲ್ಲಿ ಸ್ಥಳ ಕೊಟ್ಟನು. ಆ ಕೊಟ್ಟಿಗೆಯ ಗೋಡೆಯಲ್ಲಿ ಒಂದು ರಂಧ್ರವಿತ್ತು. ರಂಧ್ರದಿಂದ ಹೊರಕ್ಕೆ ನುಸುಳಿ ಹೋಗಿ ಮೊಲ ಒಂದು ಕೋಸುಗೆಡ್ಡೆ ಹುಡುಕಿ ತಂದು ತಿಂದಿತು, ನರಿ ಒಂದು ಕೋಳಿಮರಿಯನ್ನು ಕದ್ದು ತಂದು ತಿಂದಿತು. ಆದರೆ ತೋಳ, ಕರಡಿ, ಸಿಂಹ ಮಾತ್ರ ಹಾಗೆ ನುಸುಳಿ ಹೋಗುವಷ್ಟು ಸಣ್ಣವಾಗಿರಲಿಲ್ಲ. ಛತ್ರದ ಯಜಮಾನನು ಒಂದು ಹಸುವನ್ನು ತಂದು ಹಾಕದಿದ್ದರೆ ಅವು ಹಸಿದುಕೊಂಡೇ ಇರಬೇಕಾಗಿತ್ತು.

ಚಿಕ್ಕವನು ಹೀಗೆ ತನ್ನ ಪ್ರಾಣಿಗಳ ಹೊಟ್ಟೆಯುಪಾಡನ್ನು ವಿಚಾರಿಸಿಕೊಂಡ ಬಳಿಕ, ನಗರದಲ್ಲಿ ಕಪ್ಪು ಬಟ್ಟೆಗಳನ್ನು ಇಳಿಯಬಿಟ್ಟುದಕ್ಕೆ ಕಾರಣ ಕೇಳಿದನು.

"ಈ ಊರಿನ ರಾಜನಿಗೆ ಒಬ್ಬಳೇ ಮಗಳು. ಅವಳು ನಾಳೆ ಸಾಯಬೇಕಾಗಿದೆ. ಅದಕ್ಕಾಗಿ ಊರವರೆಲ್ಲ ದುಃಖಪಡುತ್ತ ಹೀಗೆ ಕಪ್ಪು ಬಟ್ಟೆ ಇಳಿಯಬಿಟ್ಟಿದ್ದಾರೆ" ಎಂದು ಛತ್ರದ ಯಜಮಾನನು ಹೇಳಿದನು.

"ಅವಳು ನಾಳೆ ಏಕೆ ಸಾಯಬೇಕು? ಅವಳಿಗೆ ಗುಣಪಡಿಸಲಾಗದಂತಹ ಕಾಯಿಲೆಯಾಗಿದೆಯೆ?" ಎಂದು ಅವನು ಕೇಳಿದನು.

"ಇಲ್ಲ, ಅವಳಿಗೇನೂ ಕಾಯಿಲೆಯಿಲ್ಲ. ಅವಳು ಆರೋಗ್ಯವಾಗಿದ್ದಾಳೆ. ಆದರೂ ಅವಳು ನಾಳೆ ಸಾಯಬೇಕಾಗಿದೆ."

"ಅದು ಏಕೆ ?"

"ಈ ಪಟ್ಟಣದ ಆಚೆ ಒಂದು ದೊಡ್ಡ ಪರ್ವತವಿದೆ. ಅದರ ಮೇಲೆ ಒಂದು ಘಟಸರ್ಪವಿದೆ. ಪ್ರತಿವರ್ಷವೂ ಅದಕ್ಕೆ ಒಂದು ಹೆಣ್ಣನ್ನು ಅರ್ಪಿಸಬೇಕು. ಇಲ್ಲದಿದ್ದರೆ, ಅದು ಪಟ್ಟಣವನ್ನೆಲ್ಲಾ ನಾಶ ಮಾಡುತ್ತದೆ. ಈಗ ಊರಿನ ಹೆಣ್ಣುಮಕ್ಕಳೆಲ್ಲ ಮುಗಿದುಹೋದರು. ರಾಜನ ಮಗಳೊಬ್ಬಳೆ ಉಳಿದಿದ್ದಾಳೆ. ಆದ್ದರಿಂದ ಬೇರೆ ಉಪಾಯ ವಿಲ್ಲ. ಅವಳನ್ನು ಆ ಘಟಸರ್ಪಕ್ಕೆ ನಾಳೆ ಒಪ್ಪಿಸಲೇಬೇಕು."

"ಆ ಘಟಸರ್ಪವನ್ನು ಯಾರೂ ಕೊಲ್ಲುವುದಿಲ್ಲವೇಕೆ ?"

"ಘಟಸರ್ಪವನ್ನು ಕೊಂದವರಿಗೆ ನನ್ನ ಮಗಳನ್ನು ಮದುವೆಮಾಡಿ ಕೊಡುತ್ತೇನೆ, ಅರ್ಧರಾಜ್ಯ ಕೊಡುತ್ತೇನೆ—ಎಂದು ರಾಜನು ಹೇಳಿ ದ್ದಾನೆ. ಅದಕ್ಕಾಗಿ ಅನೇಕ ವೀರರು ಪ್ರಯತ್ನಿಸಿ ಜೀವ ಕಳೆದು ಕೊಂಡಿದ್ದಾರೆ."

ಚಿಕ್ಕವನು ಮುಂದೆ ಮಾತಾಡಲಿಲ್ಲ. ಮಾರನೆಯ ಬೆಳಗ್ಗೆ ತನ್ನ ಪ್ರಾಣಿಗಳ ಸಮೇತ ಊರಾಚೆಯ ಪರ್ವತದ ಮೇಲೆ ಹತ್ತಿದನು. ತುದಿ ಯಲ್ಲಿ ಒಂದು ಸಣ್ಣ ದೇವಸ್ಥಾನ ಕಂಡುಬಂದಿತು. ಒಳಗಿನ ಬಲಿಪೀಠದ ಮೇಲೆ ಪಾನಕ ತುಂಬಿದ ಮೂರು ಬಟ್ಟಲುಗಳಿದ್ದುವು. ಆ ಬಟ್ಟಲುಗಳ ಮೇಲೆ "ಇದರೊಳಗಿನ ಪಾನಕವನ್ನು ಕುಡಿದವರು ಅತ್ಯಂತ ಬಲಶಾಲಿ ಗಳಾಗುತ್ತಾರೆ. ದೇವಸ್ಥಾನದ ಮೆಟ್ಟಲುಗಳ ಬಳಿ ಹೂಳಿರುವ ಕತ್ತಿ ಯನ್ನು ಹಿಡಿದು ತಿರುಗಿಸಲು ಸಮರ್ಥರಾಗುತ್ತಾರೆ" ಎಂಬ ಮಾತು ಕೆತ್ತಿತ್ತು. ಚಿಕ್ಕವನು ಆ ಪಾನಕವನ್ನು ಆಗಲೇ ಕುಡಿಯದೆ, ಮೆಟ್ಟಲ ಬಳಿ ಹೂತಿದ್ದ ಕತ್ತಿಯನ್ನು ಅಲ್ಲಾಡಿಸಲು ನೋಡಿದನು. ಅದು ಅವನ ಕೈಲಾಗಲಿಲ್ಲ. ಆಗ ದೇವಸ್ಥಾನಕ್ಕೆ ಬಂದು ಮೂರೂ ಬಟ್ಟಲುಗಳ ಪಾನಕವನ್ನು ಕುಡಿದನು. ಅನಂತರ ಕತ್ತಿಯನ್ನು ಎತ್ತುವುದು ಕಷ್ಟವಾಗ ಲಿಲ್ಲ. ಅದನ್ನು ಸುಲಭವಾಗಿ ಎತ್ತಿ ತಿರುಗಿಸಿದನು.

ರಾಜನ ಮಗಳನ್ನು ಘಟಸರ್ಪಕ್ಕೆ ಅರ್ಪಿಸುವ ಹೊತ್ತು ಬಂದಿತು. ಅವಳ ತಂದೆ, ಸೇನಾಧಿಪತಿ ಮತ್ತು ಇತರ ರಾಜಪರಿವಾರದವರು ಅವ

ಳೊಡನೆ ಬೆಟ್ಟದ ಬುಡದವರೆಗೂ ಬಂದರು. ಅವಳು ಕೆಳಗಿನಿಂದಲೇ ಮೇಲೆ ನೋಡಿ, ತುದಿಯಲ್ಲಿದ್ದ ಬೇಟೆಗಾರನನ್ನು ತನಗಾಗಿ ಕಾದಿರುವ ಘಟಸರ್ಪವೆಂದು ಭಾವಿಸಿ, ಹತ್ತಿಹೋಗಲು ಹಿಂಜರಿದಳು. ಸ್ವಲ್ಪ ವೇಳೆ ಯಾದ ಮೇಲೆ, ತಾನು ಹೋಗದಿದ್ದರೆ ಪಟ್ಟಣವೆಲ್ಲವೂ ನಾಶವಾಗುವು ದೆಂದು ಹೆದರಿ, ಧೈರ್ಯ ತಂದುಕೊಂಡು ಒಂದೊಂದೇ ಮೆಟ್ಟಿಲಾಗಿ ಮೇಲೆ ಹತ್ತಿದಳು. ರಾಜನೂ ಪರಿವಾರದವರೂ ದುಃಖದಿಂದ ಹಿಂದಿರು ಗಿದರು. ಸೈನ್ಯಾಧಿಪತಿ ಮಾತ್ರ ಹಿಂದೆ ಉಳಿದನು. ಕೊನೆಯವರೆಗೂ ಅಲ್ಲಿದ್ದು ನೋಡುವುದು ಅವನ ಕರ್ತವ್ಯವಾಗಿತ್ತು.

ರಾಜಕುಮಾರಿ ಪರ್ವತದ ನೆತ್ತಿಯನ್ನು ಸೇರಿದಳು. ಅವಳು ಎಂದುಕೊಂಡಿದ್ದಂತೆ ಅಲ್ಲಿ ಘಟಸರ್ಪವಿರಲಿಲ್ಲ. ಅದಕ್ಕೆ ಬದಲು, ತನ್ನನ್ನು ಕಾಪಾಡುವೆನೆಂದು ಪ್ರತಿಜ್ಞೆಮಾಡಿದ ಒಬ್ಬ ಯುವಕನನ್ನು ಆಕೆ ಅಲ್ಲಿ ಕಂಡಳು. ಅವನು ಅವಳನ್ನು ಅಲ್ಲಿಯ ದೇವಸ್ಥಾನದೊಳಕ್ಕೆ ಕಳುಹಿಸಿ ಬಾಗಿಲಿಗೆ ಬೀಗ ಹಾಕಿದನು.

ಸ್ವಲ್ಪ ಹೊತ್ತಿನಲ್ಲಿಯೇ ಭಯಂಕರವಾದ ಗುಡುಗು ಕೇಳಿಸಿತು. ಏಳು ತಲೆಗಳ ಮಹಾ ಘಟಸರ್ಪ ತನ್ನ ಕಡೆಗೆ ಬರುವುದನ್ನು ಚಿಕ್ಕವನು ಕಂಡನು.

ಅದು ಅವನನ್ನೆ ನೋಡುತ್ತ, "ಇಲ್ಲಿ ಈ ಬೆಟ್ಟದ ಮೇಲೆ ನೀನೇನು ಮಾಡುವೆ?" ಎಂದು ಆಶ್ಚರ್ಯವಾಗುವಂತೆ ಕೂಗಿಕೊಂಡಿತು.

"ನಾನು ನಿನ್ನೊಡನೆ ಯುದ್ಧಮಾಡಲು ಬಂದಿದ್ದೇನೆ" ಎಂದು ಚಿಕ್ಕವನು ಧೈರ್ಯದಿಂದ ಉತ್ತರಕೊಟ್ಟನು.

"ಓಹ್ಹೋ! ಅನೇಕ ವೀರಾಧಿವೀರರು ಹೀಗೆಯೇ ಹೇಳಿ ತಮ್ಮ ಜೀವ ಕಳೆದುಕೊಂಡಿದ್ದಾರೆ. ನಾನು ಇಂದು ನಿನ್ನನ್ನು ಕೊನೆಗಾಣಿಸು ತ್ತೇನೆ" ಎಂದು ಆ ಘಟಸರ್ಪವು ಕಿರಿಚಿಕೊಂಡಿತು. ಅದರ ಏಳು ದಾಡೆ ಗಳಿಂದಲೂ ಬೆಂಕಿ ಬಂದು, ಸುತ್ತಲೂ ಇದ್ದ ಹುಲ್ಲೆಲ್ಲ ಹತ್ತಿ ಉರಿದು ಹೋಯಿತು. ಆ ಶಾಖದಿಂದಲೂ ಹೊಗೆಯಿಂದಲೂ ಚಿಕ್ಕವನಿಗೆ ಉಸಿರು

ಕಟ್ಟಿಕೊಂಡಿತು. ಆದರೆ ಅವನ ಪ್ರಾಣಿಗಳು ಓಡಿಬಂದು ಆ ಬೆಂಕಿಯನ್ನು ತುಳಿದು ಆರಿಸಿದುವು.

ಘಟಸರ್ಪಕ್ಕೆ ರೋಷ ಬಂದಿತು. ಅದು ಚಿಕ್ಕವನ ಮೇಲೆ ಹಾರಿತು. ಅವನು ತನ್ನ ಕತ್ತಿಯನ್ನು ಅದರ ಕಡೆ ಬೀಸಿ ಅದರ ಮೂರು ತಲೆಗಳನ್ನು ಕತ್ತರಿಸಿದನು. ಘಟಸರ್ಪವು ಪುನಃ ಕೋಪದಿಂದ ಮೇಲೆದ್ದು, ಅವನ ಕಡೆಗೆ ಬೆಂಕಿಯ ಜ್ವಾಲೆಗಳನ್ನು ಎರಚಿ, ಮೇಲೆ ಬೀಳುವುದರಲ್ಲಿತ್ತು. ಆಗ ಚಿಕ್ಕವನು ಅದರ ಇನ್ನೂ ಮೂರು ತಲೆಗಳನ್ನು ಕಡಿದನು. ಕಡೆಯ ಹೊಡೆತ ಹೊಡೆದು ಅದರ ಬಾಲವನ್ನು ಕತ್ತರಿಸಿದನು. ಅವನಿಗೆ ಆ ವೇಳೆಗೆ ಶಕ್ತಿ ಕುಂದಿದ್ದುದರಿಂದ ತನ್ನ ಪ್ರಾಣಿಗಳನ್ನು ಕರೆದನು. ಅವು ಬಂದು ಆ ಘಟಸರ್ಪವನ್ನು ಚೂರುಚೂರು ಮಾಡಿದುವು.

ಯುದ್ಧವೆಲ್ಲಾ ಮುಗಿದ ಮೇಲೆ ಚಿಕ್ಕವನು ದೇವಸ್ಥಾನದ ಬಾಗಿಲನ್ನು ತೆರೆದನು. ಯುದ್ಧ ನಡೆಯುತ್ತಿದ್ದಾಗ ರಾಜಕುಮಾರಿಯು ಭಯಗೊಂಡು ಮೂರ್ಛೆ ಹೋಗಿದ್ದಳು. ಚಿಕ್ಕವನು ಅವಳನ್ನು ಹೊರಗೆ ಎತ್ತಿಕೊಂಡು ಬಂದನು. ಅವಳಿಗೆ ಜ್ಞಾನ ಬಂದು ಅವಳು ಕಣ್ಣು ತೆರೆದಾಗ, ಚೂರುಚೂರಾಗಿದ್ದ ಆ ಸರ್ಪವನ್ನು ಅವಳಿಗೆ ತೋರಿಸಿದನು. ರಾಜಕುಮಾರಿಯು ಸಂತೋಷಪಟ್ಟು, “ಘಟಸರ್ಪವನ್ನು ಕೊಂದವರಿಗೆ ನನ್ನನ್ನು ಮದುವೆಮಾಡಿಕೊಡುವುದಾಗಿ ನಮ್ಮ ತಂದೆ ಹೇಳಿದ್ದನು. ಅದರಂತೆ ನಾನು ನಿನ್ನನ್ನು ವರಿಸುತ್ತೇನೆ” ಎಂದಳು. ಪ್ರಾಣಿಗಳು ಮಾಡಿದ ಉಪಕಾರಕ್ಕೆ ಬಹುಮಾನವಾಗಿ ತನ್ನ ಹವಳದ ಸರವನ್ನು ತೆಗೆದು ಅವುಗಳಿಗೆ ಹಂಚಿಕೊಟ್ಟಳು. ಆ ಸರದ ಚಿನ್ನದ ಕೊಂಡಿಯನ್ನು ಸಿಂಹಕ್ಕೆ ಕೊಟ್ಟಳು. ತನ್ನ ಹೆಸರು ಹಾಕಿದ ಕರವಸ್ತ್ರವನ್ನು ಚಿಕ್ಕವನಿಗೆ ಕೊಟ್ಟಳು. ಅವನು ಘಟಸರ್ಪದ ಏಳು ನಾಲಗೆಗಳನ್ನು ಕತ್ತರಿಸಿ ಅದರಲ್ಲಿ ಸುತ್ತಿ ಇರಿಸಿಕೊಂಡನು.

ಬಿಸಿಲಿನಲ್ಲಿ ಯುದ್ಧಮಾಡಿ ದಣಿದಿದ್ದುದರಿಂದ ಚಿಕ್ಕವನೂ ರಾಜಕುಮಾರಿಯೂ ಆಯಾಸಪರಿಹಾರಕ್ಕಾಗಿ ಅಲ್ಲಿಯೆ ಮಲಗಿಕೊಂಡರು. ಮಲಗುವುದಕ್ಕೆ ಮುಂಚೆ ಚಿಕ್ಕವನು ಸಿಂಹವನ್ನು ಕರೆದು “ಮಲಗಬೇಡ. ಎಚ್ಚರವಾಗಿದ್ದು ನೋಡಿಕೊ” ಎಂದು ಆಜ್ಞೆಮಾಡಿದನು.

ಸಿಂಹಕ್ಕೆ ಆಯಾಸವಾಗಿತ್ತು. ಅದು ಕರಡಿಯನ್ನು ಕೂಗಿ "ಮಲಗಬೇಡ. ಎಚ್ಚರವಾಗಿದ್ದು ನೋಡಿಕೊ" ಎಂದು ಆಜ್ಞೆಮಾಡಿ ತಾನು ಮಲಗಿಕೊಂಡಿತು. ಕರಡಿಗೂ ಆಯಾಸವಾಗಿತ್ತು. ಅದು ತೋಳಕ್ಕೆ ಹೇಳಿ ನಿದ್ದೆಹೋಯಿತು. ತೋಳ ನರಿಗೆ ಹೇಳಿತು. ನರಿ ಮೊಲಕ್ಕೆ ಹೇಳಿತು. ಮೊಲಕ್ಕೂ ಆಯಾಸವಾಗಿತ್ತು. ಆದರೆ ಅದು ಯಾರಿಗೂ ಆಜ್ಞೆಮಾಡುವಂತಿರಲಿಲ್ಲವಾದ್ದರಿಂದ ಅದು ಯಾರಿಗೂ ಹೇಳ ದೆಯೆ ನಿದ್ದೆಮಾಡಿಬಿಟ್ಟಿತು.

ಅದುವರೆಗು ಸೈನ್ಯಾಧಿಪತಿಯು ಕೆಳಗೇ ಕುಳಿತಿದ್ದನು. ಬೆಟ್ಟದ ಮೇಲೆ ಏನೂ ಸದ್ದು ಕೇಳಿಸದಿರಲು, ಧೈರ್ಯ ತಂದುಕೊಂಡು ಮೇಲೇರಿ ದನು. ಅಲ್ಲಿ ಚೂರುಚೂರಾಗಿ ಬಿದ್ದಿದ್ದ ಘಟಸರ್ಪದ ಹೆಣವನ್ನು ಕಂಡನು. ಅಲ್ಲಿಯೆ ಹತ್ತಿರದಲ್ಲಿ ರಾಜಕುಮಾರಿಯೂ ಚಿಕ್ಕವನೂ ಅವನ ಪ್ರಾಣಿಗಳೂ ಗಾಢನಿದ್ರೆಯಲ್ಲಿದ್ದರು. ಸೇನಾಧಿಪತಿಯು ಬಹಳ ಕೆಟ್ಟ ಮನುಷ್ಯ. ಅವನು ಚಿಕ್ಕವನ ತಲೆ ಕಡಿದನು. ರಾಜಕುಮಾರಿಯನ್ನು ಎತ್ತಿಕೊಂಡು ಬೆಟ್ಟವಿಳಿದನು. ಅವಳಿಗೆ ಎಚ್ಚರವಾಯಿತು. ಭಯದಿಂದ ಕೂಗಿಕೊಂಡಳು. ಸೇನಾಧಿಪತಿ ಅವಳ ಬಾಯಿ ಮುಚ್ಚಿ, "ನೀನು ಈಗ ನನ್ನ ಕೈವಶವಾಗಿರುವೆ. ಘಟಸರ್ಪವನ್ನು ನಾನೇ ಕೊಂದೆನೆಂದು ಎಲ್ಲ ರಿಗೂ ಹೇಳಬೇಕು. ಇಲ್ಲದಿದ್ದರೆ ನಿನ್ನನ್ನು ಇಲ್ಲಿಯೇ ಕೊಂದುಬಿಡುವೆನು" ಎಂದು ಗದರಿಸಿದನು. ರಾಜಕುಮಾರಿಯು ಹೆದರಿ ಅವನ ಆಜ್ಞೆಯಂತೆ ನಡೆಯುವೆನೆಂದು ಒಪ್ಪಿದಳು.

ಸೇನಾಧಿಪತಿಯು ಅವಳನ್ನು ಅರಮನೆಗೆ ಕರೆದುಕೊಂಡು ಹೋದನು. ಅವಳನ್ನು ಘಟಸರ್ಪ ತಿಂದುಬಿಟ್ಟಿರಬೇಕೆಂದು ದುಃಖ ಪಡುತ್ತಿದ್ದ ರಾಜನು ಅವಳನ್ನು ಕಣ್ಣಾರೆ ಕಂಡು ಸಂತೋಷಪಟ್ಟನು. ಆ ಸಂತೋಷದಲ್ಲಿ ಏನು ಮಾಡಬೇಕು ಎಂಬುದೇ ಅವನಿಗೆ ತಿಳಿಯದೆ ಹೋಯಿತು. ಸೈನ್ಯಾಧಿಪತಿಯು ರಾಜನ ಹತ್ತಿರ ಬಂದು, ತಾನೇ ಘಟಸರ್ಪವನ್ನು ಕೊಂದು ರಾಜಕುಮಾರಿಯನ್ನು ಬದುಕಿಸಿದೆನೆಂದು ಹೇಳಿಕೊಂಡನು.

"ಇದು ನಿಜವೆ?" ಎಂದು ರಾಜನು ಮಗಳನ್ನು ಕೇಳಿದನು.

"ಹೌದು. ನಿಜವೆಂದೇ ಕಾಣುತ್ತದೆ. ಆದರೆ ಒಂದು ವರುಷದ ಮೇಲೆ ಒಂದು ದಿವಸ ಕಳೆಯುವವರೆಗೂ ನಾನು ಮದುವೆಮಾಡಿಕೊಳ್ಳಲು ಒಪ್ಪುವುದಿಲ್ಲ" ಎಂದು ಅವಳು ಹೇಳಿದಳು. ತಾನು ಮದುವೆ ಮಾಡಿಕೊಳ್ಳುವುದಾಗಿ ಮಾತುಕೊಟ್ಟ ಬೇಟೆಗಾರನ ವಿಷಯವೇನಾದರೂ ಅಷ್ಟರೊಳಗೆ ತಿಳಿದುಬರಬಹುದೆಂದು ಅವಳಿಗೆ ಆಸೆಯಿತ್ತು.

ಇತ್ತ ಬೆಟ್ಟದ ಮೇಲೆ, ಪ್ರಾಣಿಗಳೆಲ್ಲವೂ ತಮ್ಮ ಯಜಮಾನನು ಸತ್ತುದನ್ನು ತಿಳಿಯದೆ ಇನ್ನೂ ನಿದ್ದೆಮಾಡುತ್ತಿದ್ದುವು. ಆಗ ಒಂದು ದೊಡ್ಡ ಜೇನುಹುಳು ಬಂದು ಮೊಲದ ಮೂಗಿನ ಮೇಲೆ ಕುಳಿತುಕೊಂಡಿತು. ಮೊಲ ಅದನ್ನು ತನ್ನ ಮುಂಗಾಲಿನಿಂದ ಓಡಿಸಿ ಪುನಃ ಮಲಗಿಕೊಂಡಿತು. ಜೇನುಹುಳು ಎರಡನೆಯ ಸಲ ಬಂದು ಕುಳಿತುಕೊಂಡಿತು. ಮೊಲ ಎರಡನೆಯ ಸಲವೂ ಅದನ್ನು ಓಡಿಸಿತು. ಮೂರನೆಯ ಸಲ ಜೇನು ಬಂದು ಮೊಲದ ಮೂಗಿನ ಮೇಲೆ ಕುಳಿತು ಕಚ್ಚಿದಾಗ ಅದಕ್ಕೆ ಎಚ್ಚರವಾಯಿತು.

ಮೊಲ ತಾನು ಎದ್ದು ನರಿಯನ್ನು ಎಬ್ಬಿಸಿತು. ನರಿ ತೋಳವನ್ನು ಎಬ್ಬಿಸಿತು. ತೋಳ ಕರಡಿಯನ್ನು ಎಬ್ಬಿಸಿತು. ಕರಡಿ ಸಿಂಹವನ್ನು ಎಬ್ಬಿಸಿತು. ಸಿಂಹ ಎದ್ದು ರಾಜಕುಮಾರಿ ಅಲ್ಲಿ ಇಲ್ಲದುದನ್ನೂ ತಮ್ಮ ಯಜಮಾನನು ಸತ್ತಿದ್ದುದನ್ನೂ ಕಂಡು ಭಯಂಕರವಾಗಿ ಗರ್ಜಿಸಿತು. ಗರ್ಜಿಸಿ, "ಇದು ಯಾರು ಮಾಡಿದ ಕೆಲಸ? ಕರಡಿ, ನೀನೇಕೆ ನನ್ನನ್ನು ಎಬ್ಬಿಸಲಿಲ್ಲ?" ಎಂದು ಕೂಗಿಕೊಂಡಿತು. ಕರಡಿ ತೋಳದ ಮೇಲೆ ತಿರುಗಿತು. ತೋಳ ನರಿಯ ಮೇಲೆ ತಿರುಗಿತು. ನರಿ ಬಡಪಾಯಿ ಮೊಲದ ಮೇಲೆ ತಿರುಗಿತು. ಮೊಲಕ್ಕೆ, ಪಾಪ, ಉತ್ತರ ಕೊಡಲು ತೋಚಲಿಲ್ಲ. ತಪ್ಪು ಅದರ ಮೇಲೆಯೆ ಬಿದ್ದಿತು. ಎಲ್ಲ ಪ್ರಾಣಿಗಳೂ ಅದನ್ನು ಕೊಲ್ಲಲು ಎದ್ದುವು.

ಆಗ ಮೊಲ "ನನ್ನನ್ನು ಕೊಲ್ಲಬೇಡಿ. ನಮ್ಮ ಯಜಮಾನ ಪುನಃ ಜೀವಿಸುವಂತೆ ಮಾಡುತ್ತೇನೆ. ಒಂದು ತರಹ ಬೇರು ಇದೆ. ಅದನ್ನು

ತುಟಿಗೆ ಸೋಕಿಸಿದರೆ, ಎಂತಹ ಗಾಯವಾಗಲಿ ಕಾಯಿಲೆಯಾಗಲಿ ವಾಸಿಯಾಗಿಬಿಡುವುದು. ಆ ಬೇರು ಸಿಕ್ಕುವ ಬೆಟ್ಟ ನನಗೆ ಗೊತ್ತು. ಅದು ಇಲ್ಲಿಂದ ಇನ್ನೂರು ಹರಿದಾರಿ ದೂರವಿದೆ" ಎಂದಿತು.

"ಇನ್ನು ಇಪ್ಪತ್ತನಾಲ್ಕು ಗಂಟೆಗಳೊಳಗೆ ನೀನು ಆ ಬೇರನ್ನು ತೆಗೆದುಕೊಂಡು ಬರಬೇಕು" ಎಂದು ಸಿಂಹ ಆಜ್ಞೆಮಾಡಿತು. ಮೊಲವು ತಡಮಾಡದೆ ಓಡಿಹೋಗಿ, ಇಪ್ಪತ್ತನಾಲ್ಕು ಗಂಟೆಗಳೊಳಗೆ ಬೇರನ್ನು ತಂದು ಕೊಟ್ಟಿತು.

ಸಿಂಹ ತನ್ನ ಯಜಮಾನನ ತಲೆಯನ್ನು ದೇಹಕ್ಕೆ ಜೋಡಿಸಿತು. ಮೊಲ ಬೇರನ್ನು ಅವನ ತುಟಿಗೆ ಸೋಕಿಸಿತು. ಒಡನೆಯೆ ತಲೆ ದೇಹಕ್ಕೆ ಅಂಟಿಕೊಂಡಿತು, ಅವನಿಗೆ ಪ್ರಾಣ ಬಂದಿತು. ಬೇಟೆಗಾರನು ಎಚ್ಚರಗೊಂಡು, ರಾಜಕುಮಾರಿ ಅಲ್ಲಿ ಇಲ್ಲದುದನ್ನು ಕಂಡು, "ನನ್ನನ್ನು ಮದುವೆಯಾಗಲು ಮನಸ್ಸಿಲ್ಲದೆ ನಾನು ಮಲಗಿದ್ದಾಗ ಹೇಳದೆ ಹೊರಟುಹೋಗಿದ್ದಾಳೆ" ಎಂದುಕೊಂಡು ಸುಮ್ಮನಾದನು.

ಸಿಂಹ ತನ್ನ ಅವಸರದಲ್ಲಿ ಅವನ ತಲೆಯನ್ನು ಹಿಂದುಮುಂದಾಗಿ ಇಟ್ಟುಬಿಟ್ಟಿತ್ತು. ರಾಜಕುಮಾರಿಯ ಯೋಚನೆಯಲ್ಲಿದ್ದುದರಿಂದ ಅವನಿಗೆ ಅದು ಮೊದಲು ಗೊತ್ತಾಗಲಿಲ್ಲ. ಮಧ್ಯಾಹ್ನ ಊಟಮಾಡುವಾಗ ತಿಳಿಯಿತು. "ನನ್ನ ತಲೆ ಹೀಗೇಕೆ ತಿರುಗಿದೆ? ನಾನು ಮಲಗಿರುವಾಗ ಏನಾಯಿತು?" ಎಂದು ಅವನು ಆ ಪ್ರಾಣಿಗಳನ್ನು ಕೇಳಿದನು. ಸಿಂಹ ನಡೆದ ಸಮಾಚಾರವನ್ನೆಲ್ಲ ಅವನಿಗೆ ತಿಳಿಸಿತು. ಅವನ ತಲೆಯನ್ನು ಸರಿಪಡಿಸುವೆನೆಂದು ನಂಬಿಕೆ ಹೇಳಿ, ಪುನಃ ಅವನ ತಲೆಯನ್ನು ಕತ್ತರಿಸಿತು. ಈ ಸಲ ಸರಿಯಾಗಿ ನೋಡಿ ಇಟ್ಟಿತು. ಮೊಲ ತಂದ ಬೇರಿನಿಂದ ತಲೆ ಪುನಃ ಮೈಗೆ ಸೇರಿಕೊಂಡಿತು.

ರಾಜಕುಮಾರಿಯನ್ನು ಕಳೆದುಕೊಂಡ ದುಃಖದಿಂದ ಆ ಬೇಟೆಗಾರನು ಊರೂರು ಸುತ್ತುತ್ತ ಹೋದನು. ತನ್ನ ಪ್ರಾಣಿಗಳನ್ನು ಜನರ ಮುಂದೆ ಕುಣಿಸಿ ಅನ್ನ ಸಂಪಾದಿಸಿದನು.

ಒಂದು ವರ್ಷ ಹೀಗೆಯೇ ಸಂಚಾರ ಮಾಡುತ್ತ, ವರ್ಷದ ಕೊನೆಯಲ್ಲಿ ತಾನು ಘಟಸರ್ಪವನ್ನು ಕೊಂದ ಊರಿಗೇ ಪುನಃ ಬಂದನು. ಆದರೆ ಈ ಸಲ ಊರನ್ನೆಲ್ಲ ಕೆಂಪು ಬಣ್ಣದಿಂದ ಅಲಂಕರಿಸಿದ್ದರು.

ಅವನು ಪುನಃ ಛತ್ರದ ಯಜಮಾನನನ್ನು ಕುರಿತು "ಇದೇನು? ಒಂದು ವರ್ಷದ ಹಿಂದೆ ನಾನು ಇಲ್ಲಿ ಬಂದಾಗ ಪಟ್ಟಣದಲ್ಲೆಲ್ಲ ಕಪ್ಪು ಕವಿದಿತ್ತು. ಈ ದಿವಸ ಏನು ಕೆಂಪಿನಿಂದ ಅಲಂಕರಿಸಿರುವರಲ್ಲ?" ಎಂದು ಕೇಳಿದನು.

"ಒಂದು ವರುಷದ ಹಿಂದೆ ನಮ್ಮ ಸೇನಾಧಿಪತಿಯು ಇಲ್ಲಿಯ ಘಟಸರ್ಪದೊಡನೆ ಕಾದಾಡಿ, ಅದನ್ನು ಕೊಂದು, ರಾಜಕುಮಾರಿಯನ್ನು ಕಾಪಾಡಿದನು. ನಾಳೆ ಅವರ ಮದುವೆ ನಡೆಯುತ್ತದೆ. ಆ ದಿವಸ ನಮ್ಮ ನಗರದಲ್ಲಿ ದುಃಖವಿದ್ದುದಕ್ಕೂ ಈ ದಿನ ಸಂತೋಷವಿರುವುದಕ್ಕೂ ಇದೇ ಕಾರಣ" ಎಂದು ಛತ್ರದ ಯಜಮಾನನು ಹೇಳಿದನು.

ಮದುವೆಯ ದಿವಸ, ಊಟಕ್ಕೆ ಕೂತುಕೊಳ್ಳುವ ವೇಳೆಯಲ್ಲಿ, ಬೇಟೆಗಾರನು ಛತ್ರದ ಯಜಮಾನನನ್ನು ಕರೆದು, "ಈ ದಿನ ರಾಜನು ಅರಮನೆಯಲ್ಲಿ ತಿನ್ನುವ ರೊಟ್ಟಿಯನ್ನು ನಾನು ನಿನ್ನ ಮನೆಯಲ್ಲಿ ತಿನ್ನುವೆನೆಂದರೆ ನೀನು ನಂಬುವೆಯೋ?" ಎಂದು ಕೇಳಿದನು.

"ಇದು ಆಗದ ಕೆಲಸ. ಇದನ್ನು ನೀನು ನಡೆಸಿದರೆ ಒಂದುನೂರು ಹೊನ್ನು ಕೊಡುತ್ತೇನೆ" ಎಂದು ಛತ್ರದ ಯಜಮಾನನು ನೂರು ಹೊನ್ನಿನ ಚೀಲವನ್ನು ಮುಂದಿಟ್ಟನು.

ಬೇಟೆಗಾರನು ಆ ಪಂಥವನ್ನು ಒಪ್ಪಿಕೊಂಡು, ತನ್ನ ಮೊಲವನ್ನು ಕರೆದು "ಮುದ್ದುಮೊಲವೆ, ಹೋಗಿ, ರಾಜನು ಅರಮನೆಯಲ್ಲಿ ತಿನ್ನುವ ರೊಟ್ಟಿಯ ಒಂದು ಚೂರು ತಾ" ಎಂದನು.

"ನಾನು ಹೋದರೆ, ದಾರಿಯಲ್ಲಿ ಕಟುಕರ ನಾಯಿಗಳು ನನ್ನ ಬೆನ್ನಟ್ಟುತ್ತವೆ" ಎಂದು ನಡುಗುತ್ತಲೇ ಮೊಲ ಹೊರಟಿತು. ಅದು ಹೆದರಿಕೊಂಡಿದ್ದಂತೆಯೆ ನಾಯಿಗಳು ಅದರ ಬೆನ್ನುಹತ್ತಿ ಅದನ್ನು ಸೀಳಲು ಯತ್ನಿಸಿದುವು. ಆದರೆ ಮೊಲ ಅರಮನೆಯ ಬಾಗಿಲಿಗೆ

ಬಂದೊಡನೆಯೆ ಕಾವಲಿನ ಸಿಪಾಯಿಗೆ ತಿಳಿಯದಂತೆ ಒಂದು ಹಾರು ಹಾರಿ ಅವನ ಗೂಡಿನಲ್ಲಿ ಅವಿತುಕೊಂಡಿತು. ನಾಯಿಗಳು ಅದು ಅವಿತು ಕೊಂಡುದನ್ನು ಕಂಡು ಅದನ್ನು ಹೊರಗೋಡಿಸಬೇಕೆಂದು ಪ್ರಯತ್ನಿಸಿ ದುವು. ಆದರೆ ಪಹರೆಯವನು ಅವುಗಳನ್ನು ಅಟ್ಟಿ ಓಡಿಸಿದನು.

ನಾಯಿಗಳ ಶಬ್ದ ನಿಂತಮೇಲೆ ಮೊಲ ಅರಮನೆಯ ಕಡೆ ಹಾರಿತು. ಒಳಗಡೆ ರಾಜನ ಮಗಳು ಕುಳಿತಿದ್ದ ಸ್ಥಳಕ್ಕೆ ಹೋಗಿ, ಅವಳ ಕುರ್ಚಿಯ ಅಡಿಯಲ್ಲಿ ನುಸುಳಿ ಅವಳ ಕಾಲು ಕೆರೆಯಿತು. ಅವಳು ಅದನ್ನು ತನ್ನ ನಾಯಿಯೆಂದು ತಿಳಿದು, ಆಚೆ ಹೋಗಹೇಳಿದಳು. ಅದು ಮೂರು ಸಲ ಕೆರೆದರೂ ಅವಳು ಅದರ ಕಡೆ ನೋಡಲಿಲ್ಲ. ಇನ್ನೊಂದು ಸಲ ಮೊಲ ಕಾಲು ಕೆರೆಯಿತು. ಆಗ ಅವಳು ತಿರುಗಿನೋಡಿ ಮೊಲವನ್ನು ಅದರ ಕೊರಳಪಟ್ಟಿಯಿಂದ ಗುರುತಿಸಿದಳು. ಅದನ್ನು ತೋಳುಗಳಲ್ಲಿ ಎತ್ತಿ ಕೊಂಡು ಅದಕ್ಕೇನುಬೇಕೆಂದು ಕೇಳಿದಳು. ಘಟಸರ್ಪವನ್ನು ಕೊಂದ ವನು ಊರಿಗೆ ಬಂದಿರುವನೆಂದು ಕೇಳಿ ಅವಳಿಗೆ ಸಂತೋಷವಾಯಿತು. ಅವನು ಕೇಳಿದ ರೊಟ್ಟಿಯನ್ನು ಕಳುಹಿಸಲು ಒಪ್ಪಿದಳು. ನಾಯಿಗಳು ಮೊಲವನ್ನು ಹಿಂಸಿಸದ ಹಾಗೆ ಅದನ್ನು ಎತ್ತಿಕೊಂಡುಹೋಗಲು ಒಬ್ಬ ಅಡುಗೆಯವನನ್ನು ಕಳುಹಿಸಿದಳು. ಅವನು ಮೊಲವನ್ನೂ ರೊಟ್ಟಿಯನ್ನೂ ಆ ಬೇಟೆಗಾರನು ತಂಗಿದ್ದ ಛತ್ರದ ಬಾಗಿಲಿನವರೆಗೂ ಒಯ್ದನು. ಅಲ್ಲಿಂದ ಮುಂದೆ ಮೊಲ ರೊಟ್ಟಿಯನ್ನು ಕೊಂಡುಹೋಗಿ ತನ್ನ ಯಜಮಾನನಿಗೆ ಕೊಟ್ಟಿತು.

"ನೋಡಿದೆಯ, ಅಯ್ಯ! ಈ ನೂರು ಹೊನ್ನು ನನ್ನದು" ಎಂದು ಬೇಟೆಗಾರನು ಛತ್ರದವನಿಗೆಂದನು. ಅವನಿಗೆ ಆಶ್ಚರ್ಯವಾಯಿತು. ಅದರಂತೆಯೇ ಬೇಟೆಗಾರನು ನರಿ, ತೋಳ, ಕರಡಿ, ಸಿಂಹಗಳನ್ನೂ ಕ್ರಮವಾಗಿ ಕಳುಹಿಸಿ ರಾಜನು ಉಪಯೋಗಿಸುವ ಮಾಂಸ, ತರಕಾರಿ ಮಿಠಾಯಿ, ದ್ರಾಕ್ಷಾರಸಗಳನ್ನೂ ತರಿಸಿದನು.

ಬೇಟೆಗಾರನು ತಾನು ಅರಮನೆಯಿಂದ ತರಿಸಿದುದನ್ನೆಲ್ಲ ತನ್ನ ಪ್ರಾಣಿಗಳಿಗೂ ಕೊಟ್ಟು ತಾನೂ ತಿಂದನು. ತಿಂದ ಬಳಿಕ "ನಾನು

ರಾಜನು ತಿನ್ನುವ ಹಾಗೆಯೆ ತಿಂದಿದ್ದೇನೆ. ಈಗ ಅರಮನೆಗೆ ಹೋಗಿ ರಾಜನ ಮಗಳನ್ನು ಮದುವೆಯಾಗುತ್ತೇನೆ" ಎಂದನು.

"ಮೊದಲೇ ಒಂದು ಗಂಡು ಗೊತ್ತಾಗಿದೆ. ಮದುವೆ ಈ ದಿವಸವೇ ನಡೆಯಬೇಕಾಗಿದೆ. ಇದು ಹೇಗೆ ಸಾಧ್ಯ?" ಎಂದು ಛತ್ರದ ಯಜಮಾನನೆಂದನು.

ಬೇಟೆಗಾರನು ರಾಜಕುಮಾರಿ ಕೊಟ್ಟ ಕರವಸ್ತ್ರದಲ್ಲಿದ್ದ ಘಟಸರ್ಪದ ಏಳು ನಾಲಗೆಗಳನ್ನು ಮುಟ್ಟಿಕೊಂಡು, "ಇದರ ಸಹಾಯದಿಂದ ಮದುವೆಯಾಗುತ್ತೇನೆ" ಎಂದನು.

ಛತ್ರದವನು ಆ ಕರವಸ್ತ್ರದ ಕಡೆ ನೋಡಿದನು. "ಇದು ಹೊರತು, ಬೇರೇನು ಆದರೂ ನಂಬಿಯೇನು. ನೀನು ನಿನ್ನ ಮಾತು ಉಳಿಸಿಕೊಂಡರೆ ನನ್ನ ಮನೆ ಹೊಲ ಎಲ್ಲಾ ನಿನಗೆ ಕೊಡುತ್ತೇನೆ" ಎಂದನು.

ಬೇಟೆಗಾರನು ಅದಕ್ಕೆ ಒಪ್ಪಿ, ತಾನು ಸೋತರೆ ಒಂದು ಸಾವಿರ ಹೊನ್ನು ಕೊಡುವೆನೆಂದು ಸಾವಿರದ ಚೀಲವನ್ನು ಮುಂದಿಟ್ಟನು.

ಬೇಟೆಗಾರನ ಪ್ರಾಣಿಗಳು ಹೀಗೆ ಛತ್ರದಿಂದ ಅರಮನೆಗೂ ಅರಮನೆಯಿಂದ ಛತ್ರಕ್ಕೂ ಹೋಗಿಬಂದುವು. ಅವು ಅರಮನೆಗೆ ಬಂದು ಹೋದುದನ್ನು ರಾಜನು ಕಂಡು, "ಆ ಪ್ರಾಣಿಗಳಿಗೆ ನಿನ್ನ ಹತ್ತಿರ ಏನು ಕೆಲಸವಿತ್ತು?" ಎಂದು ತನ್ನ ಮಗಳನ್ನು ಕೇಳಿದನು.

"ಅದನ್ನು ನಿನಗೆ ನಾನು ಹೇಳಲಾರೆ. ಆ ಪ್ರಾಣಿಗಳ ಯಜಮಾನನನ್ನು ಬರಮಾಡು. ಅವನು ತಿಳುಹಿಸಬಹುದು" ಎಂದು ರಾಜಕುಮಾರಿ ಹೇಳಿದಳು.

ಅದರಂತೆ ಅರಸನು ಆ ಪ್ರಾಣಿಗಳ ಯಜಮಾನನನ್ನು ಬರಹೇಳಿ ಒಬ್ಬ ಆಳನ್ನು ಅಟ್ಟಿದನು. ಆಳು ಛತ್ರಕ್ಕೆ ಬಂದಾಗ, ಆ ಬೇಟೆಗಾರನು "ರಾಜನ ಉಡುಗೆತೊಡುಗೆಗಳನ್ನೂ ಆರುಕುದುರೆಗಳ ಒಂದು ರಥವನ್ನೂ ತೆಗೆದುಕೊಂಡು ಬಾ. ಹಾಗೆಯೇ ಕೆಲವರು ಸೇವಕರನ್ನೂ ಕಳುಹಿಸುವಂತೆ ರಾಜನಿಗೆ ಹೇಳು" ಎಂದನು.

ರಾಜನು ಅವನು ಕಳುಹಿಸಿದ ಉತ್ತರವನ್ನು ಕೇಳಿ ಮಗಳ ಕಡೆ ತಿರುಗಿ, " ಇದಕ್ಕೆ ಏನು ಮಾಡಬೇಕು? " ಎಂದು ಕೇಳಿದನು. ಅವನ ಇಷ್ಟದಂತೆ ಕಳುಹಿಸುವುದೆ ಒಳ್ಳೆಯದೆಂದು ಅವಳು ಹೇಳಿದಳು. ರಾಜನು ಹಾಗೆಯೆ ಮಾಡಿದನು. ಬೇಟೆಗಾರನು ರಾಜನ ಉಡುಗೆತೊಡುಗೆಗಳನ್ನು ಹಾಕಿಕೊಂಡು, ಘಟಸರ್ಪದ ನಾಲಿಗೆಗಳಿದ್ದ ಕರವಸ್ತ್ರವನ್ನು ತೆಗೆದು ಕೊಂಡು ಆರುಕುದುರೆಗಳ ರಥದಲ್ಲಿ ಅರಮನೆಗೆ ಹೋದನು.

ಅವನು ಬರುವುದನ್ನು ರಾಜನು ಕಂಡನು. " ಇವನನ್ನು ಹೇಗೆ ಎದುರುಗೊಳ್ಳಬೇಕು? " ಎಂದು ಮಗಳನ್ನು ಕೇಳಿದನು. " ನೀನೇ ಎದ್ದು ಹೋಗಿ ಅವನನ್ನು ಕರೆದುಕೊಂಡು ಬಾ " ಎಂದು ಅವಳು ಹೇಳಿ ದಳು. ರಾಜನು ತಾನೇ ಎದ್ದು ಹೋಗಿ ಅವನನ್ನು ಅವನ ಪ್ರಾಣಿ ಗಳೊಡನೆ ಊಟದ ಮನೆಗೆ ಕರೆದುಕೊಂಡು ಬಂದನು. ಅವನನ್ನು ತನ್ನ ಮಗಳ ಸಮೀಪದಲ್ಲಿ ಕುಳ್ಳಿರಿಸಿದನು. ಸೇನಾಧಿಪತಿಯು ಮದುವಣಿಗ ನಾಗಿ ಅಲ್ಲಿಯೆ ಕುಳಿತಿದ್ದನು. ಆದರೂ ಅವನಿಗೆ ಬೇಟೆಗಾರನ ಗುರುತು ಗೊತ್ತಾಗಲಿಲ್ಲ.

ರಾಜನು ಘಟಸರ್ಪದ ಏಳು ತಲೆಗಳನ್ನು ಅಲ್ಲಿ ನೆರೆದಿದ್ದವರಿಗೆಲ್ಲ ತೋರಿಸಿ, "ಇವು ನಮ್ಮ ಸೇನಾಧಿಪತಿ ಕಡಿದ ತಲೆಗಳು. ಈ ಸಾಹಸಕ್ಕೆ ಪ್ರತಿಫಲವಾಗಿ ನಾನು ನನ್ನ ಮಗಳನ್ನು ಇವನಿಗೆ ಮದುವೆಮಾಡಿಕೊಡು ವೆನು" ಎಂದನು.

ಆಗ ಬೇಟೆಗಾರನು ಎದ್ದು ನಿಂತು, ಆ ಏಳು ತಲೆಗಳ ಬಾಯಿ ಬಿಡಿಸಿ, "ಇದರೊಳಗಿನ ನಾಲಿಗೆಗಳು ಎಲ್ಲಿ? " ಎಂದು ಕೇಳಿದನು.

ಸೇನಾಧಿಪತಿಗೆ ನಡುಕ ಹತ್ತಿಕೊಂಡಿತು. ಏನು ಉತ್ತರ ಕೊಡು ವುದಕ್ಕೂ ಅವನಿಗೆ ತೋಚಲಿಲ್ಲ. ಕಡೆಗೆ, ಗಾಬರಿಯಿಂದ "ಘಟಸರ್ಪ ಗಳಿಗೆ ನಾಲಿಗೆಗಳಿಲ್ಲ" ಎಂದನು.

"ಸುಳ್ಳಾಡುವವರಿಗೆ ನಾಲಿಗೆಗಳಿಲ್ಲ" ಎಂದು ಬೇಟೆಗಾರನು ಕೂಗಿ ದನು. "ಘಟಸರ್ಪದ ನಾಲಿಗೆಗಳು ಗೆದ್ದವನ ಹೆಸರಿಗೆ ಜಯದ ಗುರುತು" ಎಂದು ತಾನು ತಂದಿದ್ದ ಕರವಸ್ತ್ರವನ್ನು ಬಿಚ್ಚಿ, ಏಳು ನಾಲಿಗೆ

ಗಳನ್ನು ತೆಗೆದು ಘಟಸರ್ಪದ ಒಂದೊಂದು ಬಾಯಿಯಲ್ಲಿ ಒಂದೊಂದು ಇಟ್ಟನು. ನಾಲಿಗೆಗಳು ಅಲ್ಲಿ ಅಂಟಿಕೊಂಡವು. ರಾಜಕುಮಾರಿಯ ಹೆಸರು ಹಾಕಿದ್ದ ಕರವಸ್ತ್ರವನ್ನು ಅವಳಿಗೆ ತೋರಿಸಿ, "ಇದು ನೀನು ಯಾರಿಗೆ ಕೊಟ್ಟದ್ದು ?" ಎಂದು ಕೇಳಿದನು. "ಘಟಸರ್ಪವನ್ನು ಕೊಂದವನಿಗೆ" ಎಂದು ಅವಳು ಉತ್ತರಕೊಟ್ಟಳು. ಅನಂತರ ತನ್ನ ಪ್ರಾಣಿಗಳನ್ನು ಕರೆದು, ಅವುಗಳ ಕತ್ತಿನಿಂದ ಸರಗಳನ್ನೂ ಸಿಂಹದ ಕತ್ತಿನಿಂದ ಚಿನ್ನದ ಕೊಂಡಿಯನ್ನೂ ತೆಗೆದು ತೋರಿಸಿ, "ಇವು ಯಾರವು?" ಎಂದನು. "ಸರ ಮತ್ತು ಕೊಂಡಿ ನನ್ನವು. ಘಟಸರ್ಪವನ್ನು ಕೊಲ್ಲಲು ಸಹಾಯ ಮಾಡಿದ ಪ್ರಾಣಿಗಳಿಗೆ ಅವನ್ನು ನಾನು ಹಂಚಿಕೊಟ್ಟೆ" ಎಂದು ಅವಳು ಹೇಳಿದಳು.

ಆಗ ಬೇಟೆಗಾರನು "ನಾನು ಯುದ್ಧಮಾಡಿದ ಬಳಿಕ ದಣಿದು ವಿಶ್ರಾಂತಿಗಾಗಿ ಮಲಗಿರುವಾಗ ಈ ಸೇನಾಧಿಪತಿ ನನ್ನ ತಲೆಯನ್ನು ಕತ್ತರಿಸಿದನು. ರಾಜಕುಮಾರಿಯನ್ನು ಹೆದರಿಸಿ ಎತ್ತಿಕೊಂಡು ಹೋಗಿ, ತಾನೇ ಘಟಸರ್ಪವನ್ನು ಕೊಂದವನೆಂದು ಸುಳ್ಳು ಹೇಳಿದನು. ಅವನು ಸುಳ್ಳು ಹೇಳಿದುದಕ್ಕೆ ಈ ನಾಲಗೆಗಳೂ ಈ ಕರವಸ್ತ್ರವೂ ಈ ಸರವೂ ಸಾಕ್ಷಿ" ಎಂದು ತಿಳಿಸಿ, ತನ್ನ ಪ್ರಾಣಿಗಳು ತನ್ನನ್ನು ಬದುಕಿಸಿದುದನ್ನೂ ತಾನು ಒಂದು ವರ್ಷಕಾಲ ಸುತ್ತಾಡುತ್ತಾ ಪುನಃ ಅದೇ ಪಟ್ಟಣಕ್ಕೆ ಬಂದು ಸೇನಾಧಿಪತಿಯ ದ್ರೋಹವನ್ನು ಛತ್ರದ ಯಜಮಾನನಿಂದ ತಿಳಿದುದನ್ನೂ ವಿವರಿಸಿದನು.

ರಾಜಕುಮಾರಿ ಅವನು ಹೇಳಿದುದನ್ನು ನಿಜವೆಂದು ತಾನು ಒಪ್ಪಿ "ಇದಕ್ಕೋಸ್ಕರವೇ ನಾನು ಒಂದು ವರುಷದ ಮೇಲೆ ಒಂದು ದಿನವಾಗುವವರೆಗೂ ಮದುವೆಮಾಡಿಕೊಳ್ಳುವುದಿಲ್ಲವೆಂದು ಹೇಳಿದ್ದುದು" ಎಂದಳು.

ಆಗ ರಾಜನು ತನ್ನ ಮಂತ್ರಿಗಳನ್ನು ಕರೆಯಿಸಿದನು. ಅವರು ಬಂದು ಸೇನಾಧಿಪತಿಗೆ ಶಿಕ್ಷೆ ವಿಧಿಸಿದರು. ಅವನನ್ನು ಕಾಡುಕೋಣಗಳ ಕಾಲಿಗೆ ಕಟ್ಟಿ ಎಳೆಸಿದರು. ಅವನು ಮಾಡಿದುದಕ್ಕೆ ತಕ್ಕ ಶಿಕ್ಷೆ ಅವನಿಗೆ ಆಯಿತು.

ಬೇಟೆಗಾರನು ರಾಜನ ಮಗಳನ್ನು ಮದುವೆಯಾದನು. ರಾಜ್ಯಕ್ಕೆ ಅವನೇ ಒಡೆಯನಾದನು, ಚಿಕ್ಕರಾಜನಾದನು. ಮದುವೆ ಬಹಳ ಸಂಭ್ರಮದಿಂದ ನಡೆಯಿತು. ಚಿಕ್ಕರಾಜನು ತನ್ನ ತಂದೆಯನ್ನೂ ಸಾಕು ತಂದೆಯನ್ನೂ ಕರೆಯಿಸಿ,ಅವರಿಗೆ ಬೇಕಾದಷ್ಟು ಹಣ ಕೊಟ್ಟು ಕಳುಹಿಸಿದನು. ಅವನು ಛತ್ರದ ಯಜಮಾನನನ್ನೂ ಮರೆಯಲಿಲ್ಲ. ಅವನ ಮನೆ ಹೊಲಗಳ ಜೊತೆಗೆ ತನ್ನ ಸಾವಿರ ಹೊನ್ನಿನ ಚೀಲವನ್ನೂ ಅವನಿಗೇ ಕೊಟ್ಟನು. ಚಿಕ್ಕರಾಜನೂ ರಾಣಿಯೂ ಸಂತೋಷದಿಂದ ರಾಜ್ಯವಾಳುತ್ತಿದ್ದರು.

ಊರ ಹೊರಗೆ ಒಂದು ಕಾಡು. ಅದು ಬಹಳ ಕೆಟ್ಟ ಕಾಡು. ಯಾರಾದರೂ ಒಂದು ಸಲ ಒಳಗೆ ಹೋಗಿಬಿಟ್ಟರೆ ಪುನಃ ಸುಲಭವಾಗಿ ಹೊರಗೆ ಬರುವಂತಿರಲಿಲ್ಲ. ಆ ಕಾಡಿನಲ್ಲಿ ಒಬ್ಬಳು ಮಂತ್ರಗಾತಿಯಿದ್ದಳು. ಚಿಕ್ಕರಾಜನಿಗೆ ಆ ಕಾಡನ್ನು ನೋಡುವ ಆಸೆ ಹತ್ತಿತು. ಅವನು ಆ ಕಾಡಿನಲ್ಲಿ ಹೋಗಿ ಬೇಟೆಯಾಡಲು ಮುದಿರಾಜನ ಅಪ್ಪಣೆಯನ್ನು ಕಾಡಿ ಬೇಡಿ ಪಡೆದನು. ಬೇಟೆಗೆ ಹೋಗುವಾಗ ದೊಡ್ಡ ಸೈನ್ಯವನ್ನು ಜೊತೆಯಲ್ಲಿ ಕರೆದುಕೊಂಡು ಹೋದನು.

ಅವನು ಕಾಡಿನ ಅಂಚಿಗೆ ಬರುವ ವೇಳೆಗೆ ಸರಿಯಾಗಿ ಮರಗಳ ನಡುವೆ ಒಂದು ಬಿಳಿಯ ಪಾರಿವಾಳವಿದ್ದುದನ್ನು ಕಂಡನು. ಕಂಡು, ತನ್ನ ಪರಿವಾರವನ್ನು ಕರೆದು, "ನಾನು ಈ ಸುಂದರವಾದ ಹಕ್ಕಿಯ ಹಿಂದೆ ಹೋಗುತ್ತೇನೆ. ನಾನು ಹಿಂದಿರುಗುವವರೆಗೂ ನೀವು ಇಲ್ಲಿಯೇ ಇರಿ" ಎಂದು ಹೇಳಿ, ತನ್ನ ಪ್ರಾಣಿಗಳ ಸಮೇತನಾಗಿ ಕಾಡಿನೊಳಕ್ಕೆ ಹೋದನು. ಅವನ ಪರಿವಾರದವರು ಸಾಯಂಕಾಲದ ವರೆಗೂ ಕಾದುಕೊಂಡಿದ್ದರು. ಸಾಯಂಕಾಲವಾದರೂ ರಾಜನು ಹಿಂದಿರುಗದಿರಲು, ತಮ್ಮ ರಾಣಿಯ ಬಳಿಗೆ ಬಂದು "ಚಿಕ್ಕರಾಜನು ಒಂದು ಬಿಳಿಯ ಪಾರಿವಾಳವನ್ನು ಬೇಟೆಯಾಡುವುದಕ್ಕೋಸ್ಕರ ಮಂತ್ರಗಾತಿಯ ಕಾಡಿಗೆ ಹೋದವನು ಹಿಂದಿರುಗಲಿಲ್ಲ" ಎಂದು ತಿಳಿಸಿದರು. ರಾಣಿ ಅದನ್ನು ಕೇಳಿ ಚಿಂತೆಗೊಳಗಾದಳು.

ಈ ನಡುವೆ ಚಿಕ್ಕರಾಜನು ಬಿಳಿಯ ಪಾರಿವಾಳದ ಬೆನ್ನಟ್ಟಿ ಹೋಗಿದ್ದನು. ಆದರೆ ಅದು ಅವನ ಕೈಗೆ ಸಿಕ್ಕಲಿಲ್ಲ. ಇನ್ನೇನು ಸಿಕ್ಕಿತು ಎನ್ನುವ ವೇಳೆಗೆ ಅದು ತಪ್ಪಿಸಿಕೊಂಡು ಮಾಯವಾಗುತ್ತಿತ್ತು. ಹೀಗೆ ಬಹಳ ದೂರ ಅದರ ಹಿಂದೆ ಹೋದ ಬಳಿಕ ತಾನು ಏಕಾಕಿಯಾದುದು ಅವನಿಗೆ ತಿಳಿಯಿತು. ಆಗ ತನ್ನ ಕೊಂಬನ್ನು ತೆಗೆದು ಊದಿದನು. ಅವನ ಪರಿವಾರವು ಬಹಳ ದೂರದಲ್ಲಿ ಇದ್ದುದರಿಂದ ಅವನಿಗೆ ಉತ್ತರ ಬರಲಿಲ್ಲ. ಆ ವೇಳೆಗೆ ರಾತ್ರಿಯಾಯಿತು. ಅದೇ ರಾತ್ರಿ ಕಾಡಿನಿಂದ ಹೊರಗೆ ಹೋಗುವುದು ಅಸಾಧ್ಯವೆಂದು ತಿಳಿದು, ಚಿಕ್ಕರಾಜನು ಅಲ್ಲಿಯೇ ಕುದುರೆಯಿಂದ ಇಳಿದು, ಒಂದು ಮರದ ಕೆಳಗೆ ಬೆಂಕಿಯನ್ನು ಹತ್ತಿಸಿ ಕುಳಿತುಕೊಂಡನು.

ಅವನು ತನ್ನ ಪ್ರಾಣಿಗಳೊಡನೆ ಬೆಂಕಿಯ ಹತ್ತಿರ ಕುಳಿತಿದ್ದಾಗ ಅವನಿಗೆ ಒಂದು ಮನುಷ್ಯಧ್ವನಿ ಕೇಳಿಬಂದ ಹಾಗಾಯಿತು. ಸುತ್ತಲೂ ನೋಡಿದನು, ಏನೂ ಕಾಣಿಸಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಏನೋ ನರಳುವ ಸದ್ದು ತಲೆಯ ಮೇಲೆ ಕೇಳಿಬಂದಿತು. ತಲೆಯೆತ್ತಿ ನೋಡಿದರೆ, ಅಲ್ಲಿ ಒಬ್ಬಳು ಮುದುಕಿ "ಅಯ್ಯೋ! ಚಳಿ! ಚಳಿ!" ಎಂದು ನಡುಗುತ್ತಿದ್ದಳು.

"ಅಷ್ಟು ಚಳಿಯಾದರೆ, ಕೆಳಗೆ ಬಂದು ಬೆಂಕಿಯ ಹತ್ತಿರ ಕಾಯಿಸಿಕೊ" ಎಂದು ಚಿಕ್ಕರಾಜನು ಅವಳನ್ನು ಕರೆದನು.

ಅದಕ್ಕೆ ಆ ಮುದುಕಿ "ಇಲ್ಲ, ಇಲ್ಲ. ನಾನು ಕೆಳಗೆ ಬಂದರೆ, ನಿನ್ನ ಪ್ರಾಣಿಗಳು ನನ್ನನ್ನು ಕಚ್ಚುತ್ತವೆ. ನನಗೆ ಹೆದರಿಕೆಯಾಗುತ್ತದೆ" ಎಂದಳು.

"ಇಲ್ಲ. ಅವು ನಿನ್ನನ್ನು ಕಚ್ಚುವುದಿಲ್ಲ, ಮುದುಕಿ. ಬಾ" ಎಂದು ಅವನು ಕರೆದರೂ ಅವಳು ಬರಲಿಲ್ಲ.

ಅವಳಿಗೆ ನಿಜವಾಗಿ ಹೆದರಿಕೆಯಾಗಿರಲಿಲ್ಲ. ಆ ಮುದುಕಿಯೆ ಆ ಕಾಡಿನಲ್ಲಿದ್ದ ಮಂತ್ರಗಾತಿ. ಆದರೂ ಅವಳು ಹೆದರಿದಂತೆ ನಟಿಸಿ, "ನಾನು ಒಂದು ಸಣ್ಣ ಕಡ್ಡಿ ಎಸೆಯುತ್ತೇನೆ. ಅದರಿಂದ ನೀನು ಅವು

ಗಳ ಬೆನ್ನ ಮೇಲೆ ಒಂದು ಸಣ್ಣ ಏಟು ಕೊಡು. ಆಗ ಅವು ನನ್ನ ತಂಟೆಗೆ ಬರುವುದಿಲ್ಲ" ಎಂದು ಹೇಳುತ್ತಾ ತನ್ನ ಮಂತ್ರದ ಕಡ್ಡಿಯನ್ನು ಎಸೆದಳು. ಅವನು ಅದರಿಂದ ಪ್ರತಿಯೊಂದು ಪ್ರಾಣಿಗೂ ಒಂದೊಂದು ಸಣ್ಣ ಏಟು ಕೊಟ್ಟನು. ಆ ಕಡ್ಡಿ ಮುಟ್ಟಿದ ಕೂಡಲೇ ಪ್ರತಿಯೊಂದು ಪ್ರಾಣಿಯೂ ಕಲ್ಲಾಯಿತು. ಆಗ ಆ ಮುದುಕಿ ನಿರ್ಭಯವಾಗಿ ಕೆಳಗೆ ದುಮುಕಿ, ತನ್ನ ಕೈಯಲ್ಲಿದ್ದ ಮತ್ತೊಂದು ಕಡ್ಡಿಯಿಂದ ಚಿಕ್ಕರಾಜನನ್ನು ಮುಟ್ಟಿದಳು. ಅವನೂ ಒಡನೆಯೆ ಕಲ್ಲಾದನು. ಆಗ ಅವಳು ಸಂತೋಷದಿಂದ ಅಂಥವೇ ಕಲ್ಲುಗಳು ಬೇಕಾದ ಹಾಗೆ ತುಂಬಿದ್ದ ಒಂದು ಹಳ್ಳದಲ್ಲಿ ಅವುಗಳನ್ನೂ ಎಸೆದಳು.

ಚಿಕ್ಕರಾಜನ ಇನ್ನೊಬ್ಬ ಸಹೋದರನು ಹಿಂದೆ ಪಶ್ಚಿಮದ ಕಡೆಗೆ ಪ್ರಯಾಣಮಾಡಿದ್ದನಷ್ಟೆ. ಅವನು ಕೂಡ, ಎಲ್ಲಿಯೂ ಏನೂ ಉದ್ಯೋಗ ಸಿಕ್ಕದೆ, ತನ್ನ ಜೊತೆಯ ಪ್ರಾಣಿಗಳನ್ನು ಜನರ ಮುಂದೆ ಕುಣಿಸುತ್ತ, ಒಂದು ದಿವಸ, ತನ್ನ ಸಹೋದರನ ಯೋಗಕ್ಷೇಮವನ್ನು ತಿಳಿಯಬೇಕೆಂದು ತೂಗುಹಾಕಿದ್ದ ಚಾಕುವನ್ನು ನೋಡಲು ಹೋದನು. ಅಲ್ಲಿಗೆ ಹೋಗಿ, ತನ್ನ ಸಹೋದರನು ಪ್ರಯಾಣಮಾಡಿದ ಕಡೆಗೆ ತಿರುಗಿಕೊಂಡಿದ್ದ ಅಲುಗಿನ ಮುಖವನ್ನು ನೋಡಿದನು. ಅದರ ಅರ್ಧಭಾಗ ಫಳಫಳನೆ ಹೊಳೆಯುತ್ತಿತ್ತು, ಉಳಿದ ಅರ್ಧಕ್ಕೆ ತುಕ್ಕು ಹಿಡಿದಿತ್ತು. ಅವನು ಅದನ್ನು ನೋಡಿ ಭಯಗೊಂಡು, "ನನ್ನ ಸಹೋದರನಿಗೆ ಏನೋ ಕೇಡು ಆಗಿರಬೇಕು. ಆದರೆ ಅಲಗಿನ ಅರ್ಧ ಭಾಗ ಇನ್ನೂ ಹೊಳೆಯುತ್ತಿರುವುದರಿಂದ ನಾನು ಅವನನ್ನು ಕಾಪಾಡಬಹುದು" ಎಂದು ಸಮಾಧಾನ ತಂದುಕೊಂಡು, ತನ್ನ ಪ್ರಾಣಿಗಳನ್ನೂ ಕರೆದುಕೊಂಡು ಪಶ್ಚಿಮದ ಕಡೆಗೆ ಹೋದನು. ಹಾಗೆಯೇ ಹೋಗಿ, ತನ್ನ ಸಹೋದರನು ಘಟಸರ್ಪವನ್ನು ಕೊಂದು ಚಿಕ್ಕರಾಜನಾದ ಊರಿಗೆ ಬಂದನು.

ಅವನು ಊರಬಾಗಿಲಿಗೆ ಬಂದಾಗ, ಅಲ್ಲಿಯ ಕಾವಲುಗಾರನು ಅವನನ್ನು ಚಿಕ್ಕರಾಜನೆಂದೇ ಭ್ರಮಿಸಿದನು. ಏಕೆಂದರೆ ಅವನೂ ಅವನ

ಸಹೋದರನೂ ಅವಳಿಮಕ್ಕಳು; ಅಲ್ಲದೆ ಇಬ್ಬರ ಹತ್ತಿರದಲ್ಲೂ ಒಂದೇ ತೆರದ ಪ್ರಾಣಿಗಳಿದ್ದುವು. ಆಗ ಆ ಕಾವಲುಗಾರನು ಅವನನ್ನು ಮರ್ಯಾದೆಯಿಂದ ಸ್ವಾಗತಿಸಿ, "ನೀನು ಕಾಡಿನಲ್ಲಿ ಮೃತನಾದೆಯೆಂದು ರಾಣಿ ಬಹಳ ಚಿಂತೆಪಡುತ್ತಿದ್ದಾಳೆ. ನೀನು ಬಂದುದನ್ನು ಆಕೆಗೆ ತಿಳಿಸಲೆ?" ಎಂದು ಕೇಳಿದನು. ಕಾವಲುಗಾರನು ತನ್ನನ್ನು ತನ್ನ ಸಹೋದರನೆಂದು ತಿಳಿದುದು ಚಿಕ್ಕರಾಜನ ಸೋದರನಿಗೆ ಅರ್ಥವಾಯಿತು. "ಇದರಿಂದ ನನ್ನ ಸೋದರನಿಗೆ ಸಹಾಯಮಾಡುವುದು ಸುಲಭವಾಗಬಹುದು" ಎಂದುಕೊಂಡು, ತಾನೇ ರಾಜನೆಂದು ಸುಳ್ಳು ಹೇಳಿದನು. ಕಾವಲುಗಾರನು ಅವನನ್ನು ಅರಮನೆಗೆ ಕರೆದುಕೊಂಡುಹೋದನು. ಅಲ್ಲಿ ಎಲ್ಲರೂ ಅವನನ್ನು ಹರ್ಷದಿಂದ ಬರಮಾಡಿಕೊಂಡರು. ರಾಣಿ ಕೂಡ ಅವನನ್ನು ತನ್ನ ಗಂಡನೆಂದೇ ಭಾವಿಸಿ, "ಏಕೆ ಇಷ್ಟು ದಿನ ನಿಂತುಬಿಟ್ಟದ್ದೆ?" ಎಂದು ಕೇಳಿದಳು. ಅದಕ್ಕೆ ಅವನು "ಕಾಡಿನಲ್ಲಿ ದಾರಿ ತಪ್ಪಿದುದರಿಂದ ಬೇಗ ಬರಲಾಗಲಿಲ್ಲ" ಎಂದನು.

ಮುಂದಿನ ಕೆಲವು ದಿನಗಳಲ್ಲಿ, ಅವನು ತನ್ನ ಸಹೋದರನು ಹೋಗಿ ಮಾಯವಾದ ಮಂತ್ರಗಾತಿಯ ಕಾಡಿನ ವಿಷಯವನ್ನೆಲ್ಲಾ ವಿಚಾರಿಸಿ ತಿಳಿದುಕೊಂಡನು. ಕಡೆಗೆ ಒಂದು ದಿವಸ ತಾನೂ ಅಲ್ಲಿಗೆ ಬೇಟೆಯಾಡಲು ಹೋಗಬೇಕೆಂದು ಹೊರಟನು. ಅವನನ್ನು ಹೊರಡದಂತೆ ತಡೆಯಲು ಮುದಿರಾಜನೂ ಚಿಕ್ಕರಾಣಿಯೂ ಏನೇನೋ ಮಾಡಿದರು. ಆದರೂ ಅವನು ತನ್ನ ಪರಿವಾರದೊಡನೆ ಕಾಡಿಗೆ ಹೊರಟೇ ಹೊರಟನು.

ಕಾಡಿನ ಅಂಚಿಗೆ ಬಂದಾಗ, ಮರದ ಮೇಲೆ ಒಂದು ಬಿಳಿಯ ಪಾರಿವಾಳ ಕಂಡುಬಂದಿತು. ಆಗ ಆ ಸಹೋದರನು ಪರಿವಾರದವರನ್ನು ಅಲ್ಲಿಯೆ ಇರಹೇಳಿ, ತಾನು ತನ್ನ ಪ್ರಾಣಿಗಳ ಸಮೇತ ಕಾಡಿನೊಳಕ್ಕೆ ಹೋದನು. ಅಲ್ಲಿ ಪಾರಿವಾಳವನ್ನು ಹಿಡಿಯಲಾರದೆ, ರಾತ್ರಿಯಾಗಲು ಅಲ್ಲಿಯೆ ಬೆಂಕಿಯನ್ನು ಹತ್ತಿಸಿ ಕುಳಿತುಕೊಂಡನು.

ಆ ಹೊತ್ತಿಗೆ ಸರಿಯಾಗಿ "ಅಯ್ಯೋ! ಚಳಿ! ಚಳಿ!" ಎಂಬ ಕೂಗು ಕೇಳಿಬಂದಿತು. ಹಾಗೆ ಕೂಗಿಕೊಂಡ ಮುದುಕಿ ಮಂತ್ರಗಾತಿ

ಯನ್ನು ಆ ಸಹೋದರನು ನೋಡಿದನು. ಕೆಳಗೆ ಬಂದು ಬೆಂಕಿ ಕಾಯಿಸಿ ಕೊಳ್ಳಲು ಕರೆದನು.

"ನಿನ್ನ ಪ್ರಾಣಿಗಳು ನನ್ನನ್ನು ಕಚ್ಚುವುವೆಂದು ನನಗೆ ಹೆದರಿಕೆ. ನಾನು ಒಂದು ಸಣ್ಣ ಕಡ್ಡಿ ಎಸೆಯುತ್ತೇನೆ. ಅದರಿಂದ ಅವುಗಳಿಗೆ ಒಂದೊಂದು ಸಣ್ಣ ಏಟು ಹಾಕು. ಅವು ನನ್ನ ತಂಟೆಗೆ ಬರುವುದಿಲ್ಲ" ಎಂದು ಆ ಮುದುಕಿಯೆಂದಳು.

ಅದಕ್ಕೆ ಆ ಸಹೋದರನು "ನಾನು ನನ್ನ ಪ್ರಾಣಿಗಳನ್ನು ಹೊಡೆಯುವುದಿಲ್ಲ. ನೀನು ಕೆಳಗೆ ಬಾ. ಇಲ್ಲದಿದ್ದರೆ, ನಾನು ಹತ್ತಿ ಬಂದು ಇಳಿಸುತ್ತೇನೆ" ಎಂದನು.

ಆಗ ಆ ಮುದುಕಿ "ನೀನು ಮೇಲೆ ಬರಬೇಡ. ನೀನು ನನ್ನನ್ನು ಮುಟ್ಟಬೇಡ" ಎಂದು ಕಿರಿಚಿಕೊಂಡಳು.

"ನೀನು ಕೆಳಗೆ ಬರದಿದ್ದರೆ ನಾನು ನಿನ್ನನ್ನು ಈ ಬಂದೂಕದಿಂದ ಹೊಡೆಯುತ್ತೇನೆ" ಎಂದು ಅವನು ತನ್ನ ಬಂದೂಕದಲ್ಲಿ ಮೂರು ಬೆಳ್ಳಿಯ ಗುಂಡುಗಳನ್ನು ತುಂಬಿ ಹೊಡೆದನು.

ಅವನು ಹಾಗೆ ಹೊಡೆದುದು ಅವಳಿಗೆ ತಾಕಿತು. ಅವಳು ಕೆಳಗೆ ಬಿದ್ದಳು. ಬಿದ್ದೊಡನೆಯೆ ಅವನು ಅವಳನ್ನು ಕಾಲಿನಿಂದ ಅದುಮಿ, "ಮುದಿ ಮಾಟಗಾತಿ, ನನ್ನ ಸಹೋದರನು ಎಲ್ಲಿ? ಹೇಳು. ಬೇಗ ಹೇಳದಿದ್ದರೆ ನಿನ್ನನ್ನು ಬೆಂಕಿಯಲ್ಲಿ ಸುಡುತ್ತೇನೆ" ಎಂದನು.

ಅವಳು ಭಯದಿಂದ ನಡುಗುತ್ತ "ಅವನು ಕಲ್ಲಾಗಿ ಆ ಹಳ್ಳದಲ್ಲಿ ಬಿದ್ದಿದ್ದಾನೆ" ಎಂದಳು.

ಪುನಃ ಅವನು "ಅವನನ್ನು ತಿರುಗಿ ಜೀವದೊಂದಿಗೆ ತರದಿದ್ದರೆ ನಿನ್ನನ್ನು ಬೆಂಕಿಯಲ್ಲಿ ಹಾಕುತ್ತೇನೆ" ಎಂದು ಹೆದರಿಸಲು, ಅವಳು ತನ್ನ ಕಡ್ಡಿಯಿಂದ ಆ ಕಲ್ಲುಗಳನ್ನು ಮುಟ್ಟಿದಳು. ಚಿಕ್ಕರಾಜನೂ ಅವನ ಪ್ರಾಣಿಗಳೂ ಇನ್ನೂ ಅನೇಕರೂ ಬದುಕಿಬಂದರು.

ಸಹೋದರರು ಒಬ್ಬರನ್ನೊಬ್ಬರು ಕಂಡು ಸಂತೋಷದಿಂದ ತಬ್ಬಿಕೊಂಡರು. ಆ ಮಂತ್ರಗಾತಿಯನ್ನು ಜೀವದೊಂದಿಗೆ ಬಿಡಬಾರದೆಂದು ಅವಳನ್ನು ಬೆಂಕಿಯಲ್ಲಿ ಸುಟ್ಟರು. ಆಗ ಕಾಡೆಲ್ಲ ಕಳಕಳಿಸಿತು, ಮೂರು ಹರಿದಾರಿ ದೂರದಲ್ಲಿ ಅರಮನೆ ಗೋಚರವಾಯಿತು.

ಸೋದರರಿಬ್ಬರೂ ಮನೆಗೆ ಹೊರಟರು. ಆಗ ಚಿಕ್ಕವನು "ನಾವು ಇಬ್ಬರೂ ಆಕಾರದಲ್ಲಿ ಒಂದೇ ಆಗಿದ್ದೇವೆ. ಇಬ್ಬರೂ ಊರಿನ ಬೇರೆ ಬೇರೆ ಬಾಗಿಲಿನಿಂದ ಹೋಗಿ ಒಂದೇ ವೇಳೆಯಲ್ಲಿ ರಾಜನ ಎದುರಿಗೆ ನಿಲ್ಲೋಣ" ಎಂದನು. ಅದರಂತೆಯೇ ಅವರಿಬ್ಬರೂ ಬೇರೆಯಾದರು. ಊರಿನ ಬೇರೆ ಬೇರೆ ಬಾಗಿಲುಗಳಿಂದ ಪ್ರವೇಶಿಸಿದರು.

ಆಗ ಎರಡು ಬಾಗಿಲುಗಳ ಕಾವಲುಗಾರರೂ ಒಂದೇ ಸಮಯದಲ್ಲಿ ರಾಜನ ಎದುರಿಗೆ ಬಂದು, "ಚಿಕ್ಕರಾಜನು ತನ್ನ ಪ್ರಾಣಿಗಳೊಡನೆ ಬಂದಿದ್ದಾನೆ" ಎಂದು ತಿಳಿಸಿದರು.

"ಇದು ಸಾಧ್ಯವಿಲ್ಲ. ಊರಿನ ಎರಡು ಹೆಬ್ಬಾಗಿಲುಗಳೂ ಹರಿದಾರಿ ದೂರದಲ್ಲಿವೆ. ಚಿಕ್ಕರಾಜನು ಎರಡು ಹೆಬ್ಬಾಗಿಲುಗಳಲ್ಲೂ ಒಂದೇ ಕಾಲದಲ್ಲಿ ಬರುವುದು ಅಸಾಧ್ಯ" ಎಂದು ರಾಜನು ಹೇಳಿದನು.

ಆದರೆ ಅವನು ಹಾಗೆ ಹೇಳುತ್ತಿರುವಾಗಲೇ, ಅರಮನೆಯ ಒಂದೊಂದು ಬಾಗಿಲಿನಿಂದ ಒಬ್ಬೊಬ್ಬ ಸಹೋದರನು ಪ್ರವೇಶಿಸಿ ರಾಜನ ಎದುರಿಗೆ ಬಂದು ನಿಂತುಕೊಂಡನು.

ರಾಜನು ತನ್ನ ಮಗಳ ಕಡೆ ತಿರುಗಿ, "ನಿನ್ನ ಗಂಡನು ಯಾರೆಂಬುದನ್ನು ನನಗೆ ತಿಳಿಸು" ಎಂದು ಕೇಳಿದನು.

ತಾನು ಪ್ರಾಣಿಗಳಿಗೆ ಕೊಟ್ಟಿದ್ದ ಸರವನ್ನು ಗಮನಿಸುವವರೆಗೂ ಅವಳಿಗೇ ಯಾರು ಯಾರೆಂಬುದನ್ನು ಗೊತ್ತಾಗಿ ಹೇಳಲು ಸಾಧ್ಯವಾಗಲಿಲ್ಲ. ಕುತ್ತಿಗೆಯಲ್ಲಿ ಚಿನ್ನದ ಕೊಂಡಿಯನ್ನು ಹಾಕಿಕೊಂಡಿದ್ದ ಸಿಂಹವನ್ನು ತೋರಿಸಿ, "ಈ ಸಿಂಹ ಯಾರನ್ನು ಹಿಂಬಾಲಿಸುತ್ತದೋ ಅವನೇ ನನ್ನ ಗಂಡ" ಎಂದಳು.

ಆಗ ಚಿಕ್ಕರಾಜನು ನಕ್ಕು ಅವಳ ಬುದ್ಧಿಯನ್ನು ಕೊಂಡಾಡಿದನು. ಆಮೇಲೆ ಎಲ್ಲರೂ ಒಟ್ಟಿಗೆ ಕುಳಿತುಕೊಂಡು ತಿಂದರು, ಕುಡಿದರು, ಹಬ್ಬ ಮಾಡಿದರು.

ಅದೇ ಸಂಜೆ ಚಿಕ್ಕರಾಜನು ತನ್ನ ಸಹೋದರನು ತಾನಿಲ್ಲದಿರುವಾಗ ಎಷ್ಟು ಒಳ್ಳೆಯವನೂ ಸತ್ಯವಂತನೂ ಆಗಿದ್ದನೆಂಬುದನ್ನು ತನ್ನ ಹೆಂಡತಿಯಿಂದ ತಿಳಿದನು. ಅಂದಿನಿಂದ ತನ್ನ ಸೋದರನನ್ನು ಇನ್ನೂ ಹೆಚ್ಚಾಗಿ ಪ್ರೀತಿಸತೊಡಗಿದನು.

ಆ ಮೇಲೆ ಎಲ್ಲರೂ ಸುಖವಾಗಿದ್ದರು.

## ೩. ಹರಿಣೀ

ಹಿಂದೆ ಇಬ್ಬರು ರಾಜರಾಣಿಯರಿದ್ದರು. ಅವರು ಒಬ್ಬರನ್ನೊಬ್ಬರು ಬಹಳ ಪ್ರೀತಿಸುತ್ತಿದ್ದರು. ಪ್ರಜೆಗಳು ಅವರನ್ನು ಗೌರವಿಸುತ್ತಿದ್ದರು. ರಾಣಿಗೆ ಇದ್ದ ಒಂದೇ ಕೊರತೆಯೆಂದರೆ, ಅವಳಿಗೆ ಮಕ್ಕಳು ಇಲ್ಲದ್ದೆ. ಅವಳು ತನಗೆ ಮಕ್ಕಳಿಲ್ಲವೆಂದು ಕೊರಗುತ್ತಿದ್ದುದನ್ನು ನೋಡಿ ವೈದ್ಯರು "ನೀನು ಊರಿನಾಚೆಯ ವನಕ್ಕೆ ಹೋಗಿ ವಿಶ್ರಮಿಸಿಕೊ. ಅಲ್ಲಿ ಒಂದು ಸೊಗಸಾದ ನೀರಿನ ಬುಗ್ಗೆಯಿದೆ" ಎಂದು ಸಲಹೆಕೊಟ್ಟರು.

ರಾಣಿ ಅದರಂತೆಯೆ ಆ ತೋಟಕ್ಕೆ ಹೋದಳು. ಅಲ್ಲಿ ನೀರು ಬೀಳುತ್ತಿದ್ದ ಕಲ್ಲಿನ ಬೋಗುಣಿಯ ಪಕ್ಕದಲ್ಲಿ ಕುಳಿತು, "ನೀವೆಲ್ಲರೂ ನನ್ನನ್ನು ಬಿಟ್ಟು ಹೋಗಿ. ನಾನು ಸ್ವಲ್ಪ ಒಂಟಿಯಾಗಿರಬೇಕು" ಎಂದು ತನ್ನ ಸಖಿಯರನ್ನು ಕೇಳಿಕೊಂಡಳು. ಅವರು ತನ್ನನ್ನು ಬಿಟ್ಟು ಹೋದ ಬಳಿಕ, ತನಗೆ ಮಕ್ಕಳಿಲ್ಲವೆಂಬ ಕೊರತೆಯಿಂದ ಯಾವಾಗಲೂ ಅಳುವಂತೆ ಅಂದೂ ಅಳತೊಡಗಿದಳು. ಹಾಗೆಯೇ ಅಳುತ್ತಿದ್ದಾಗ ಅವಳ ಕಣ್ಣೀರಿನ ಪಟಲದ ಆಚೆ ಒಂದು ಏಡಿ ಕಾಣಿಸಿಕೊಂಡಿತು. ಅದನ್ನು ಕಂಡು ರಾಣಿಗೆ ಆಶ್ಚರ್ಯವಾಯಿತು. ಆ ಏಡಿ ತನ್ನನ್ನು ಮಾತನಾಡಿಸಿದಾಗ ಅವಳ ಆಶ್ಚರ್ಯ ಇನ್ನೂ ಅಧಿಕವಾಯಿತು.

ಆ ಏಡಿ "ಮಹಾರಾಣಿ, ನಿನ್ನ ಆಸೆ ಕೈಗೂಡುತ್ತದೆ. ಆದರೆ ಮೊದಲು ನೀನು ಗಂಧರ್ವಕನ್ಯೆಯರ ಅರಮನೆಗೆ ಹೋಗಬೇಕು. ನಾನು ಅಲ್ಲಿಗೆ ದಾರಿ ತೋರಿಸುತ್ತೇನೆ. ಆ ಅರಮನೆ ಪ್ರಸಿದ್ಧವಾದುದಾದರೂ ಮನುಷ್ಯರ ಕಣ್ಣಿಗೆ ಕಾಣದಂತೆ ಮೋಡಗಳು ಅದನ್ನು ಮುಚ್ಚಿವೆ" ಎಂದಿತು.

ರಾಣಿಗೆ ಸಂತೋಷವಾಯಿತು. ಅರಮನೆಯ ಮಾರ್ಗವನ್ನು ತೋರಿಸುವಂತೆ ಆ ಏಡಿಯನ್ನು ಕೇಳಿಕೊಂಡಳು. ಅದೇ ಕ್ಷಣದಲ್ಲಿ ಏಡಿ ಒಂದು ಸಾಮಾನ್ಯ ಸ್ತ್ರೀಯ ರೂಪವನ್ನು ತಾಳಿ ರಾಣಿಯ ಸಮೀಪದಲ್ಲಿ ನಿಂತಿತು. ನೀರು ಆ ಸ್ತ್ರೀಯ ಗಲ್ಲದವರೆಗೆ ಬಂದರೂ ಅವಳ ಬಟ್ಟೆ ಇಷ್ಟೂ ಒದ್ದೆಯಾಗಿರಲಿಲ್ಲ.

ಅವಳು ರಾಣಿಗೆ ತಲೆಬಾಗಿ ದಾರಿ ತೋರಿಸಿದಳು. ರಾಣಿ ಊರ ಹೊರಗಿನ ಕಾಡಿನಲ್ಲಿ ಚಿಕ್ಕಂದಿನಿಂದ ತಿರುಗಾಡಿದ್ದಳು. ಆದರೂ ಆ ಸ್ತ್ರೀ ತೋರಿಸಿದ ದಾರಿ ಅವಳಿಗೆ ಹೊಸದಾಗಿತ್ತು. ಮುಂದೆ ಗಂಧರ್ವ ಕನ್ಯೆಯರ ಅರಮನೆ ಸಿಕ್ಕಿತು. ಅದರ ಗೋಡೆಗಳಿಗೂ ಮೇಲುಛಾವಣಿಗೂ ವಜ್ರ ಉಪಯೋಗಿಸಿದ್ದರು. ಅಂಥ ನೋಟವನ್ನು ರಾಣಿ ಎಂದೂ ಕಂಡಿರಲಿಲ್ಲ. ಅವಳಿಗೆ ಆಶ್ಚರ್ಯವೂ ಆನಂದವೂ ಒಂದೇ ಕಾಲದಲ್ಲಿ ಉಂಟಾಯಿತು.

ಅವರಿಬ್ಬರೂ ಅರಮನೆಯ ಬಾಗಿಲನ್ನು ಸೇರಿದಾಗ, ಆರು ಜನ ಗಂಧರ್ವಕನ್ಯೆಯರು ಹೊರಗೆ ಬಂದು ಅವರನ್ನು ವಂದಿಸಿದರು. ಅವರಲ್ಲಿ ಪ್ರತಿಯೊಬ್ಬಳೂ ರಾಣಿಗೆ ಬಗ್ಗಿ ನಮಸ್ಕಾರಮಾಡಿ ಒಂದೊಂದು ಹೂವು ಕೊಟ್ಟಳು. ಮಲ್ಲಿಗೆ, ಜಾಜಿ, ಸಂಪಿಗೆ, ಪಾದರಿ, ಕಮಲ, ಗುಲಾಬಿ ಎಂಬ ಈ ಆರು ಹೂಗಳು ರಾಣಿಯ ಕೈತುಂಬ ತುಂಬಿದುವು.

ಹೀಗೆ ಅವಳ ಕೈತುಂಬ ಹೂ ತುಂಬಿ, ಆ ಗಂಧರ್ವಕನ್ಯೆಯರು "ಅಮ್ಮಾ, ಇಷ್ಟರಲ್ಲಿಯೇ ನೀನು ಒಬ್ಬ ಮುದ್ದು ಮಗಳನ್ನು ಪಡೆಯುವೆಯೆಂದು ತಿಳಿಸಲು ನಮಗೆ ಸಂತೋಷವಾಗುತ್ತದೆ. ನೀನು ಅವಳನ್ನು ಬಹಳ ಕಾಲದಿಂದ ಇಚ್ಛಿಸುತ್ತಿರುವೆಯಾಗಿ, ಅವಳಿಗೆ ಇಚ್ಛಾದೇವಿಯೆಂದು ಹೆಸರಿಡು. ಅದು ಕಾಮದೇವನ ಹೆಂಡತಿಯ ಹೆಸರು. ಅವಳಿಗೆ ಸಕಲ ಸದ್ಗುಣಗಳನ್ನು ಅನುಗ್ರಹಿಸಬೇಕೆಂದು ನಮಗೆ ಇಷ್ಟವಿದೆ. ಆದುದರಿಂದ ಮಗು ಹುಟ್ಟಿದ ದಿವಸ ನಮ್ಮನ್ನು ಕರೆ. ನೀನು ಸುಮ್ಮನೆ ನಮ್ಮನ್ನು ನೆನೆಸಿಕೊಂಡು ನಿನ್ನ ಬೊಗಸೆಯಲ್ಲಿರುವ ಒಂದೊಂದು ಹೂವಿನ ಹೆಸರನ್ನೂ ಕೇಳು. ನಾವು ಅಲ್ಲಿ ಪ್ರತ್ಯಕ್ಷವಾಗುತ್ತೇವೆ" ಎಂದರು.

ರಾಣಿಯ ಸಂತೋಷಕ್ಕೆ ಪಾರವೆ ಇರಲಿಲ್ಲ. ಅವಳು ಒಬ್ಬೊಬ್ಬ ಗಂಧರ್ವಕನ್ಯೆಯನ್ನೂ ಸ್ನೇಹದಿಂದ ಆಲಿಂಗಿಸಿಕೊಂಡಳು. ಬಳಿಕ ಅವರು ಅವಳನ್ನು ತಮ್ಮ ಹೂ ಹಣ್ಣಿನ ತೋಟದ ಸುತ್ತ ತಿರುಗಾಡಿಸಿದರು. ಹೀಗೆ ಗಂಧರ್ವಕನ್ಯೆಯರೊಂದಿಗೆ ಕೆಲವು ಸಮಯ ಕಳೆದ ಬಳಿಕ, ಸ್ತ್ರೀರೂಪವನ್ನು ತಾಳಿದ್ದ ಏಡಿ ರಾಣಿಯನ್ನು ಪುನಃ ಬುಗ್ಗೆಯ ಬಳಿಗೇ ಕರೆದುತಂದು ಬಿಟ್ಟು, ಮಾಯವಾಯಿತು.

ಕೆಲವು ಕಾಲದಲ್ಲೇ ಇಚ್ಛಾದೇವಿ ಜನಿಸಿದಳು. ರಾಣಿಯು ಆ ಗಂಧರ್ವ ಕನ್ಯೆಯರು ಹೇಳಿದ್ದಂತೆ, ಅವರನ್ನು ನೆನೆದು ಅವರು ಕೊಟ್ಟದ್ದ ಹೂಗಳ ಹೆಸರನ್ನು ಜಪಿಸಿದಳು. ಆ ಗಂಧರ್ವಕನ್ಯೆಯರು ಅಲ್ಲಿ ಪ್ರತ್ಯಕ್ಷವಾದರು. ಪ್ರತ್ಯಕ್ಷವಾದವರು ರಾಣಿಗೆ ನಮಸ್ಕಾರ ಮಾಡಿ ಮಗುವನ್ನು ನೋಡಲು ಹೊರಟರು. ಮಗುವಿಗೆ ಬಹುಕಾಲ ಬಾಳುವ ಅನೇಕ ಬಹುಮಾನಗಳನ್ನು ಕೊಟ್ಟರು.

ಅವರು ಮಗುವಿಗೆ ಕೊಟ್ಟ ಬಹುಮಾನಗಳನ್ನು ರಾಣಿಯು ಆನಂದದಿಂದಲೂ ಕೃತಜ್ಞತೆಯಿಂದಲೂ ಸ್ವೀಕರಿಸಿದಳು. ಅದರಲ್ಲೂ ಆ ಗಂಧರ್ವ ಕನ್ಯೆಯರು ಒಂದು ತೊಟ್ಟಿಲನ್ನು ಮುಂದಿಟ್ಟಾಗ ರಾಣಿಯ ಆನಂದ ಇನ್ನೂ ಅಧಿಕವಾಯಿತು. ಆ ತೊಟ್ಟಿಲನ್ನು ಬಹಳ ಬೆಲೆಬಾಳುವ ಮರದಿಂದ ಮಾಡಿದ್ದರು. ಅದರ ನಾಲ್ಕು ಮೂಲೆಗಳ ಕಂಬಗಳಲ್ಲೂ ವಜ್ರ ಕೆಂಪುಗಳಿಂದ ಮನ್ಮಥರನ್ನು ಕೆತ್ತಿದ್ದರು. ಮಗು ಅತ್ತಾಗಲೆಲ್ಲ ತೊಟ್ಟಿಲು ತಾನಾಗಿಯೆ ತೂಗುತ್ತಿತ್ತು.

ಅನಂತರ ಮಗುವನ್ನು ಪ್ರತಿಯೊಬ್ಬ ಗಂಧರ್ವಕನ್ಯೆಯೂ ತೊಡೆಯ ಮೇಲೆ ಎತ್ತಿಕೊಂಡು, ಮುತ್ತಿಟ್ಟು, ಮಗುವಿಗೆ ಅನೇಕ ಗುಣಗಳನ್ನು ಕೋರಿದರು. ಒಬ್ಬಳು ಚೆಲುವನ್ನೂ ಇನ್ನೊಬ್ಬಳು ಆರೋಗ್ಯವನ್ನೂ ಮತ್ತೊಬ್ಬಳು ಸದ್ಗುಣವನ್ನೂ ಬೇರೊಬ್ಬಳು ಬುದ್ಧಿಯನ್ನೂ ಉಳಿದವಳು ಕೈಗೊಂಡ ಕೆಲಸವನ್ನು ಮುಗಿಸುವ ಶಕ್ತಿಯನ್ನೂ ಅನುಗ್ರಹಿಸಿದರು. ಅವರು ತನ್ನ ಚಿಕ್ಕ ಮಗಳಿಗೆ ತೋರಿಸುತ್ತಿದ್ದ ಅನುಗ್ರಹಕ್ಕಾಗಿ ರಾಣಿಯು ಅವರಿಗೆ ಕೃತಜ್ಞತೆಯಿಂದ ವಂದಿಸುತ್ತಿದ್ದಳು.

ಆ ವೇಳೆಗೆ ಒಂದು ದೊಡ್ಡ ಏಡಿ ಅಲ್ಲಿ ಕಾಣಿಸಿಕೊಂಡು, " ರಾಣಿ, ನಿನ್ನದು ಎಂಥ ಕೃತಘ್ನತೆ! ಬುಗ್ಗೆಯ ಬಳಿ ಕಂಡವಳನ್ನು ಇಷ್ಟು ಬೇಗ ಮರೆತುಬಿಟ್ಟೆಯಲ್ಲ! ನೀನು ನನ್ನ ಸಹೋದರಿಯರಿಗೆ ಹೇಳಿಕಳುಹಿಸಿದರೂ ನನಗೆ ಹೇಳಿಕಳುಹಿಸಲಿಲ್ಲ. ನಾನು ನಿನ್ನನ್ನು ಅವರ ಬಳಿಗೆ ಕರೆದುಕೊಂಡುಹೋದುದರಿಂದ ನೀನು ನನಗೆ ಹೆಚ್ಚು ಋಣಿಯಾಗಿರಬೇಕಲ್ಲವೆ? " ಎಂದು ಅಸಮಾಧಾನದಿಂದ ಗದರಿಕೊಂಡಿತು.

ರಾಣಿ ತಾನು ಮಾಡಿದುದು ತಪ್ಪಾಯಿತೆಂದು ಎಷ್ಟೋ ಬೇಡಿಕೊಂಡಳು. ಏಡಿಯ ಅಸಮಾಧಾನವನ್ನು ಶಾಂತಿಗೊಳಿಸಲು ಗಂಧರ್ವ ಕನ್ಯೆಯರು ತಮ್ಮ ಕೈಲಾದುದನ್ನೆಲ್ಲ ಮಾಡಿದರು. ಸ್ತ್ರೀರೂಪವನ್ನು ತಾಳಿ ತಮ್ಮ ಜೊತೆಯಲ್ಲಿ ಆಟಪಾಟಗಳಿಗೆ ಸೇರಬೇಕೆಂದು ಕೇಳಿಕೊಂಡರು. ಆದರೂ ಆ ಏಡಿಯ ಅಸಮಾಧಾನ ಬಹಳ ಹೊತ್ತಿನವರೆಗೂ ಇಳಿಯಲಿಲ್ಲ. ಕಡೆಗೆ ಅವರೆಲ್ಲರ ಮಾತಿನಿಂದ ಮನಸ್ಸು ಕರಗಿ, ಮಗುವಿಗೆ ಶಾಪ ಕೊಡುವುದನ್ನು ಬಿಟ್ಟು, "ನಾನು ಮೊದಲು ಯೋಚಿಸಿದಂಥ ಶಾಪವನ್ನು ಈಗ ಇವಳಿಗೆ ಹಾಕುವುದಿಲ್ಲ. ಆದರೆ, ಹದಿನೈದು ವಯಸ್ಸು ತುಂಬುವುದಕ್ಕೆ ಮುಂಚೆ ಇವಳು ಸೂರ್ಯನ ಬೆಳಕು ಕಂಡಾಳು, ಜೋಕೆ! ಆಮೇಲೆ ಸಂಕಟಪಡಬೇಕಾದೀತು!" ಎಂದಳು.

ರಾಣಿ ಎಷ್ಟೋ ಅತ್ತಳು. ಗಂಧರ್ವ ಕನ್ಯೆಯರು ಎಷ್ಟೋ ಬೇಡಿಕೊಂಡರು. ಆದರೂ ಅವಳು ತನ್ನ ನಿಷ್ಕರ್ಷೆಯನ್ನು ಬದಲಾಯಿಸಲಿಲ್ಲ. ಹಾಗೆಯೇ ಏಡಿಯ ಆಕಾರದಲ್ಲಿಯೇ ಮೆಲ್ಲನೆ ಕೊಟಡಿಯಿಂದ ಹೊರಗೆ ಹೋದಳು.

ಏಡಿಯ ಶಾಪದಿಂದ ತನ್ನ ಮಗುವನ್ನು ಕಾಪಾಡುವುದು ಹೇಗೆಂದು ರಾಣಿ ಆ ಗಂಧರ್ವಕನ್ಯೆಯರನ್ನು ಕೇಳಿದಳು. ಮೇಲೆ ಬಾಗಿಲು ಕಿಟಕಿಗಳು ಯಾವುದೂ ಇಲ್ಲದ ಒಂದು ಅರಮನೆಯನ್ನು ನೆಲದ ಕೆಳಗೆ ಕಟ್ಟಬೇಕು, ರಾಜಕುಮಾರಿ ಹದಿನೈದು ತುಂಬುವ ತನಕ ಅಲ್ಲಿಯೆ ಬೆಳೆಯಬೇಕು—ಎಂದು ಅವರು ನಿಶ್ಚಯಿಸಿದರು. ಹೀಗೆ ನಿಶ್ಚಯಮಾಡಿಕೊಂಡು ಪ್ರತಿಯೊಬ್ಬರೂ ತಮ್ಮ ಕೈಕೋಲುಗಳಿಂದ ನೆಲದ ಮೇಲೆ ಮೂರು ಸಲ ಕುಟ್ಟಿದರು. ಕುಟ್ಟಿದೊಡನೆ ಅರಮನೆ ಸಿದ್ಧವಾಗಿಹೋಯಿತು. ಅರಮನೆಯ ಗೋಡೆಗಳೆಲ್ಲ ಅಮೃತಶಿಲೆಯಿಂದಾಗಿತ್ತು. ನೆಲವೂ ಮೇಲುಛಾವಣಿಯೂ ವಜ್ರ ಪಚ್ಚೆಗಳಿಂದ ಕೆತ್ತಿ ಆಗಿತ್ತು.

ಅರಮನೆಗೆ ಕಿಟಕಿಗಳಿಲ್ಲದಿದ್ದರೂ ಒಳಗೆ ದೀಪಗಳು ಬೆಳಗುತ್ತಿದ್ದುವು. ದೀಪಗಳ ಬೆಳಕು ಹಗಲುಬೆಳಕಿನಂತೆಯೆ ಚಮತ್ಕಾರವಾಗಿತ್ತು.

ಇಂತಹ ಅರಮನೆಯಲ್ಲಿ ರಾಜಕುಮಾರಿ ಬೆಳೆದಳು. ಗಂಧರ್ವಕನ್ಯೆಯರು ದಯಪಾಲಿಸಿದ ವರಗಳಿಂದ ರಾಜಕುಮಾರಿ ಸಹಜವಾಗಿ ಬುದ್ಧಿವಂತೆ ಯಾಗಿದ್ದರೂ ಸಕಲ ವಿದ್ಯೆಗಳಲ್ಲಿಯೂ ಪ್ರವೀಣರಾದ ಉಪಾಧ್ಯಾಯರು ಅವಳಿಗೆ ಕಲಿಸುತ್ತಿದ್ದರು.

ಆರು ಜನ ಗಂಧರ್ವಕನ್ಯೆಯರೂ ಆಗಾಗ ಬಂದು ಇಚ್ಛಾದೇವಿ ಯನ್ನು ನೋಡಿಕೊಂಡು ಹೋಗುತ್ತಿದ್ದರು. ಇಚ್ಛಾದೇವಿ ಚೆಲುವೆಯಾಗಿ ಬೆಳೆದಳು. ರಾಜರಾಣಿಯರು ತಾವು ರಾಜ್ಯವಾಳುವ ಹೊತ್ತು ಹೊರತು ಉಳಿದೆಲ್ಲಾ ಸಮಯವನ್ನು ಅವಳೊಡನೆ ಕಳೆಯುತ್ತಿದ್ದರು. ಗಂಧರ್ವ ಕನ್ಯೆಯರೆಲ್ಲರಿಗೂ ಇಚ್ಛಾದೇವಿ ಪ್ರಿಯಳಾಗಿದ್ದರೂ ಮಲ್ಲಿಗೆ ಹೂವಿನ ಮಲ್ಲಿಕಾದೇವಿಗೆ ಅವಳ ಮೇಲೆ ವಿಶೇಷವಾದ ಪ್ರೀತಿಯಿತ್ತು. ಇಚ್ಛಾ ದೇವಿ ಹಗಲುಬೆಳಕನ್ನು ಕಾಣದ ಹಾಗೆ ಬಹಳ ಎಚ್ಚರದಿಂದಿರ ಬೇಕೆಂದು ಅವಳು ರಾಣಿಗೆ ಆಗಾಗ್ಗೆ ನೆನಪುಕೊಡುತ್ತಿದ್ದಳು. ಮಲ್ಲಿಕಾ ದೇವಿಗೆ ಬುಗ್ಗೆಯ ಬಳಿಯ ಏಡಿ ಎಷ್ಟು ಕ್ರೂರಿಯೆಂಬುದು ಚೆನ್ನಾಗಿ ತಿಳಿದಿತ್ತು.

ರಾಜಕುಮಾರಿಯ ಹದಿನಾಲ್ಕನೆಯ ವರ್ಧಂತಿ ನಡೆಯಿತು. ಅದು ಆದ ಒಡನೆಯೆ ರಾಣಿ ತನ್ನ ಪಟ್ಟಣದಲ್ಲಿದ್ದ ಪ್ರಖ್ಯಾತ ಚಿತ್ರಕಾರ ನನ್ನು ಕರೆಯಿಸಿ ತನ್ನ ಮಗಳ ಚಿತ್ರಗಳನ್ನು ಬರೆಯಿಸಿದಳು. ಅವನು ಬರೆದು ಮುಗಿಸಿದ ಮೇಲೆ ಅವುಗಳನ್ನು ಜಗತ್ತಿನ ಅನೇಕ ವೀರ ರಾಜಕುಮಾರರಿಗೆ ಕಳುಹಿಸಿಕೊಟ್ಟಳು. ಚಿತ್ರವನ್ನು ನೋಡಿದವರೆಲ್ಲರೂ ಇಚ್ಛಾದೇವಿಯಲ್ಲಿ ಮೋಹಗೊಂಡರು. ಆದರೆ ಮಹಾಶೂರನೆಂದು ಅನ್ವರ್ಥವಾಗಿ ಹೆಸರು ಪಡೆದಿದ್ದ ರಾಜಕುಮಾರನೊಬ್ಬನು ಇಚ್ಛಾ ದೇವಿಯ ಚಿತ್ರವನ್ನು ಕಂಡು ಹುಚ್ಚನಂತಾದನು. ತನ್ನ ಕೋಣೆಯಲ್ಲಿ ತಾನೊಬ್ಬನೇ ಕುಳಿತು ಸುಮ್ಮನೆ ಆ ಚಿತ್ರದೊಂದಿಗೆ ಮಾತನಾಡುವನು, ಹಾಡುವನು, ಆ ಚಿತ್ರಕ್ಕೆ ಪತ್ರ ಬರೆಯುವನು.

ಮಹಾಶೂರನ ತಂದೆ ಮಗನನ್ನು ಅನೇಕ ದಿವಸಗಳಾದರೂ ಕಾಣದೆ, ತನ್ನ ಪರಿವಾರದವರನ್ನು ಕೇಳಿದನು. 'ಮಹಾರಾಜ, ಕಳೆದ

ಯುದ್ಧದಲ್ಲಿ ಅವನ ಮೆದುಳಿಗೆ ಏನೋ ಏಟು ಬಿದ್ದಿರಬೇಕೆಂದು ತೋರುತ್ತದೆ. ಅವನು ಕೋಣೆಯಲ್ಲಿ ಒಬ್ಬನೇ ಕುಳಿತು, ಹಗಲೂ ರಾತ್ರಿ ಯಾರೋ ಹೆಂಗುಸಿನೊಡನೆ ಮಾತಾಡುವಂತೆ ಮಾತನಾಡುತ್ತಾನೆ, ಹಾಡುತ್ತಾನೆ' ಎಂದು ಹೇಳಿದರು.

ಮಹಾರಾಜನಿಗೆ ಏನು ಮಾಡಲೂ ತೋಚಲಿಲ್ಲ. ಮಗನನ್ನು ಕರೆಕಳುಹಿಸಿದನು. ಅವನು ಕಳೆಗುಂದಿದ್ದುದನ್ನು ನೋಡಿದನು. ಕುಮಾರನ ದುಃಖಕ್ಕೆ ಕಾರಣವೇನೆಂದು ಕೇಳಿದನು. ಕುಮಾರನು ತಂದೆಯ ಕಾಲುಗಳ ಮೇಲೆ ಬಿದ್ದು, "ಅಪ್ಪ, ಆ ಅಚ್ಚ್ಕಕರಿಯ ಕೃಷ್ಣಾಕುಮಾರಿಯನ್ನು ನಾನು ಮದುವೆಯಾಗಬೇಕೆಂದು ನೀನು ಇಷ್ಟಪಡುವುದಾದರೂ ನನ್ನ ಮನಸ್ಸೆಲ್ಲಾ ಇಚ್ಛಾದೇವಿಯ ಮೇಲಿದೆ. ನಾನು ಅವಳನ್ನು ಹೊರತು ಇನ್ನು ಯಾರನ್ನೂ ಮದುವೆಯಾಗುವುದಿಲ್ಲ" ಎಂದನು.

ತನ್ನ ಮಗನು ಒಂದು ಚಿತ್ರಕ್ಕೆ ಮೋಹಗೊಂಡು ಹೀಗೆಲ್ಲ ಆಡುವುದು ನೋಡಿ ಮಹಾರಾಜನು ನಕ್ಕನು. ಆದರೆ ಅದರಿಂದ ಏನೂ ಕುಮಾರನ ಮನಸ್ಸು ಬದಲಾಗಲಿಲ್ಲ. ಅವನು ತನ್ನ ಕೋಣೆಗೆ ಹೋಗಿ ಇಚ್ಛಾದೇವಿಯ ಚಿತ್ರವನ್ನು ತಂದು ತಂದೆಗೆ ತೋರಿಸಿದನು. ರಾಜನು ಅಷ್ಟು ಚೆಲುವಾದ ಚಿತ್ರವನ್ನು ಅದಕ್ಕೆ ಮೊದಲು ನೋಡಿರಲಿಲ್ಲ. ಅವನು ಆಶ್ಚರ್ಯದಿಂದ ಮೂಕನಾದನು.

ಕೊಂಚ ವೇಳೆಯಾದ ಬಳಿಕ ಮಹಾರಾಜನು ಕುಮಾರನನ್ನು ಕುರಿತು, "ನಿನ್ನ ಇಷ್ಟವೇ ನನ್ನ ಇಷ್ಟ. ನಾವು ಯುದ್ಧಮಾಡಬೇಕಾಗಿ ಬರಬಹುದಾದರೂ ಸರಿಯೆ, ಕೃಷ್ಣಾಕುಮಾರಿಯ ಕೈ ಬೇಡಿ ಕಳುಹಿಸಿರುವ ರಾಯಭಾರಿಯನ್ನು ಹಿಂದಕ್ಕೆ ಕರೆಸಬೇಕು. ಇಚ್ಛಾದೇವಿಯನ್ನು ಮದುವೆಮಾಡಿಕೊಡಬೇಕೆಂದು ಬೇಡುವುದಕ್ಕಾಗಿ ಇನ್ನೊಬ್ಬ ರಾಯಭಾರಿಯನ್ನು ಕಳುಹಿಸಬೇಕು" ಎಂದನು.

ತಂದೆಯು ಕೊಟ್ಟ ನಂಬಿಕೆಯನ್ನು ಕಿವಿಯಾರೆ ಕೇಳಿ ಕುಮಾರನ ಮುಖ ಆನಂದದಿಂದ ಅರಳಿತು. ರಾಯಭಾರಿಯನ್ನು ಕಳುಹಿಸುವು

ದಾದರೆ ಬೇಗ ಕಳುಹಿಸಬೇಕೆಂದು ಕೇಳಿಕೊಂಡನು. ಅವನ ಇಷ್ಟದಂತೆ ಮಹಾರಾಜನು ಒಬ್ಬ ರಾಯಭಾರಿಯನ್ನು ಆಗಲೇ ಹೋಗಹೇಳಿ ಆಜ್ಞೆಮಾಡಿದನು. ಆ ರಾಯಭಾರಿಗಾಗಿ ಇಪ್ಪತ್ತುನಾಲ್ಕು ಉತ್ತಮ ರಥಗಳನ್ನು ಅಲಂಕರಿಸಿ ತಂದರು. ಜೊತೆಗೆ ಐವತ್ತು ಸಾಧಾರಣ ರಥ ಗಳೂ ಹೊರಟವು. ಇಪ್ಪತ್ತುನಾಲ್ಕು ಸಾವಿರ ಸೈನಿಕರು ರಾಯಭಾರಿಯ ಪರಿವಾರವಾಗಿ ಹೊರಟರು. ಮಹಾಶೂರನು ಇಚ್ಛಾದೇವಿಗೆ ಅನೇಕ ಬಹುಮಾನಗಳನ್ನು ಕಳುಹಿಸಿದನು. ಅವುಗಳ ಜೊತೆಗೆ ತನ್ನದೂ ಒಂದು ಚಿತ್ರವನ್ನು ಕಳುಹಿಸಿದನು.

ರಾಯಭಾರಿ ಬಂದ ಸುದ್ದಿ ಇಚ್ಛಾದೇವಿಯ ತಾಯಿತಂದೆಗೆ ತಿಳಿಯಿತು. ಅವರು ತಮ್ಮ ಮಗಳನ್ನು ಅವನಿಗೆ ತೋರಿಸಬೇಕೆಂದು ಆತುರಪಟ್ಟಾಗ, "ಹೀಗೆ ಮಾಡತಕ್ಕುದಲ್ಲ. ಅವಳ ಹದಿನೈದನೆಯ ವರ್ಧಂತಿ ಆಗುವ ವರೆಗೂ ಅವಳು ತನ್ನ ಅರಮನೆಯಿಂದ ಕದಲಲಾಗದು" ಎಂದು ಮಲ್ಲಿಕಾದೇವಿ ಬಂದು ತಡೆದಳು. ರಾಣಿ ಅದಕ್ಕೆ ಒಪ್ಪಿ, ರಾಯಭಾರಿ ಬಂದುದನ್ನು ರಾಜಕುಮಾರಿಗೆ ತಿಳಿಸಕೂಡದೆಂದು ಆಜ್ಞೆ ಮಾಡಿದಳು.

ರಾಯಭಾರಿಯ ಮೆರವಣಿಗೆ ಬಹಳ ಉದ್ದವಾಗಿತ್ತು. ಮೆರವಣಿಗೆ ಪಟ್ಟಣದ ಬಾಗಿಲುಗಳನ್ನು ಹಾಯಲು ಇಪ್ಪತ್ತುಮೂರು ಗಂಟೆಗಳ ಕಾಲ ಹಿಡಿಯಿತು. ರಾಯಭಾರಿ ರಾಜರಾಣಿಯರ ಬಳಿಗೆ ಬಹಳ ಸಂಭ್ರಮದಿಂದ ಬಂದನು. ಅನೇಕ ದಿನಗಳ ವರೆಗೆ ಅವನಿಗೆ ಬೇಕಾದ ಹಾಗೆ ಊಟ ಉಪಚಾರ ನಡೆಯಿತು. ಕಡೆಗೆ ರಾಯಭಾರಿ ಇಚ್ಛಾ ದೇವಿಯನ್ನು ಕಾಣಲು ಬಯಸಿದನು. ಆದರೆ ಅವಳನ್ನು ಕಾಣುವುದು ಅಸಾಧ್ಯವೆಂದು ಕೇಳಿ ತಿಳಿದು ವಿಸ್ಮಿತನಾದನು.

ರಾಯಭಾರಿಯು ರಾಜದಂಪತಿಗಳಿಗೆ ಮಹಾಶೂರನ ಚಿತ್ರವನ್ನು ತೋರಿಸಿದನು. ಅವರು ಅದನ್ನು ನೋಡಿ ನೋಡಿ ಮರುಳಾದರು. ರಾಣಿ ಆ ಚಿತ್ರವನ್ನು ತೆಗೆದುಕೊಂಡು ಹೋಗಿ ಮಗಳಿಗೆ ತೋರಿಸಿ, "ಇಂಥ ಯುವಕನನ್ನು ಮದುವೆಯಾಗುವುದರಲ್ಲಿ ನಿನ್ನ ಅಭಿಪ್ರಾಯ

ವೇನು ?" ಎಂದು ಕೇಳಿದಳು. ಇಚ್ಛಾದೇವಿ ತನ್ನ ಮದುವೆಗೆ ಸಿದ್ಧತೆಯಾಗುತ್ತಿದೆಯೆಂದು ತಿಳಿದು, ಏನೂ ಹೇಳದೆ, ಸುಮ್ಮನೆ ಲಜ್ಜೆಯಿಂದ ತಲೆ ತಗ್ಗಿಸಿದಳು. "ನಿಜವಾಗಿಯೂ ಇಂಥ ಯುವಕನನ್ನು ವರಿಸಿದರೆ ನಿನಗೆ ಸಂತೋಷವಾಗುವುದಲ್ಲವೆ?" ಎಂದು ರಾಣಿ ಪುನಃ ಕೇಳಿದಳು. ಲಜ್ಜೆಯಿಂದ ರಾಜಕುಮಾರಿಯ ತಲೆ ಇನ್ನೂ ಕುಸಿಯಿತು. ವಿಧೇಯಳಾದ ಮಗಳಂತೆ "ನೀವು ಯಾರನ್ನು ಆರಿಸಿದರೂ ನನಗೆ ಸಂತೋಷವೇ" ಎಂದು ಇಚ್ಛಾದೇವಿ ಉತ್ತರಕೊಟ್ಟಳು. ಆಗ ರಾಣಿ ರಾಯಭಾರಿಯ ಆಗಮನವನ್ನು ತಿಳಿಸಿದಳು, ಅವನು ತಂದ ಬಹುಮಾನಗಳನ್ನೆಲ್ಲ ತೋರಿಸಿದಳು. ಆದರೆ ಇಚ್ಛಾದೇವಿಯ ಗಮನವೆಲ್ಲಾ ಮಹಾಶೂರನ ಚಿತ್ರದ ಮೇಲಿತ್ತು.

ರಾಯಭಾರಿ ಬಂದ ದಾರಿ ಹಿಡಿದು ಹಿಂದಿರುಗಿದನು. "ಇನ್ನೂ ಮೂರು ತಿಂಗಳು ಕಳೆಯುವವರೆಗೂ ರಾಜಕುಮಾರಿ ತನ್ನ ಅರಮನೆಯನ್ನು ಬಿಟ್ಟು ಬರುವಂತಿಲ್ಲ" ಎಂದು ಮಹಾಶೂರನಿಗೆ ತಿಳಿಸಿದನು. ಇಚ್ಛಾದೇವಿ ತನಗೆ ದೊರೆತಳೆಂದು ಅವನಿಗೆ ಮಹದಾನಂದವಾಯಿತು. ಆದರೆ ಇನ್ನೂ ಮೂರು ತಿಂಗಳು ಅವಳಿಗಾಗಿ ಕಾಯಬೇಕೆಂದು ಕೇಳಿ ಅವನಿಗೆ ಮಹಾದುಃಖವಾಯಿತು. ಅವನು ಒಂಟಿಯಾಗಿ ಕುಳಿತು ಅವಳ ಚಿತ್ರದೊಂದಿಗೆ ಸುಮ್ಮನೆ ಮಾತನಾಡುವನು, ಹಾಡುವನು. ಊಟಮಾಡುತ್ತಿರಲಿಲ್ಲ, ನಿದ್ದೆಮಾಡುತ್ತಿರಲಿಲ್ಲ. ಹೀಗಾಗಿ, ಸ್ವಲ್ಪ ಕಾಲದಲ್ಲಿಯೇ ಅವನು ನಿಶ್ಶಕ್ತನಾದ, ರೋಗಿಯಾದ. ವೈದ್ಯರು ಕೊಟ್ಟ ಮದ್ದು ಅವನ ಮೈಗೆ ಅಂಟಲಿಲ್ಲ. ಅವನು ಸತ್ತುಹೋಗಬಹುದೆಂದು ಎಲ್ಲರೂ ಹೆದರಿದರು.

ಮಹಾಶೂರನ ತಂದೆಯು ಇಚ್ಛಾದೇವಿಯ ತಂದೆಯ ಬಳಿಗೆ ತಾನೇ ಹೋಗಿ ಅವಳನ್ನು ಕಳುಹಿಸಲು ಪ್ರಾರ್ಥಿಸಬೇಕೆಂದು ನಿಶ್ಚಯಿಸಿದನು. ಅವಳಿಗೆ ಹೆಚ್ಚುಕಡಿಮೆ ಹದಿನೈದು ವರ್ಷ ತುಂಬಿದ್ದುದರಿಂದ ಹೆಚ್ಚಿನದೇನೂ ಕೇಡಾಗಲಾರದೆಂದು ಅವನು ನಂಬಿದ್ದನು. ಆದರೆ ಕುದುರೆಯ ಮೇಲೆ ಪ್ರಯಾಣಮಾಡಲು ಅವನಿಗೆ ಶಕ್ತಿಯಿರಲಿಲ್ಲ. ಗಾಡಿಯಲ್ಲಿ ಹೋದರೆ ಬಹಳ ನಿದಾನವಾಗುವುದು ಎಂದು, ತಾನು

ಹೇಳಬೇಕಾದುದೆಲ್ಲವನ್ನೂ ಕಾಗದದಲ್ಲಿ ಮನಸ್ಸಿಗೆ ಮುಟ್ಟುವಂತೆ ಬರೆದು ರಾಯಭಾರಿಯ ಕೈಯಲ್ಲಿ ಕಳುಹಿಸಿಕೊಟ್ಟನು.

ಈ ನಡುವೆ ಕೃಷ್ಣಾಕುಮಾರಿಯ ಬಳಿಗೆ ಹೋದ ರಾಯಭಾರಿಗೆ ಹೆದರಿಕೆಯಿಂದ ಅರ್ಧ ಜೀವವಾಗಿತ್ತು. ಮಹಾಶೂರನು ತನ್ನನ್ನು ನಿರಾಕರಿಸಿದನೆಂಬ ಸುದ್ದಿ ಕೇಳಿ ಅವಳು ಸಿಟ್ಟಾಗಿದ್ದಳು. ಆ ಸಿಟ್ಟನ್ನು ರಾಯಭಾರಿಯ ಮೇಲೆ ತಿರುಗಿಸಿ, "ನಾನೇನು ಚೆಲುವಿನಲ್ಲಿ ಕಡಿಮೆಯೆ? ಐಶ್ವರ್ಯದಲ್ಲಿ ಕಡಿಮೆಯೆ ? ನನ್ನ ಮೈಯಿನ ಕಪ್ಪುಬಣ್ಣ ನೋಡು. ಈ ದಪ್ಪ ತುಟಿಗಳು ನೋಡು. ಈ ಅಗಲವಾದ ಮೂಗು ನೋಡು. ನನ್ನ ರಾಜ್ಯದಲ್ಲಿ ಸುತ್ತಾಡಿ ಇಲ್ಲಿಯ ಐಶ್ವರ್ಯ ನೋಡು" ಎಂದು ಕೂಗಾಡಿದಳು.

ರಾಯಭಾರಿ ಅವಳ ಸಿಂಹಾಸನದ ಮುಂದೆ ಮೂರು ಸಲ ಅಡ್ಡ ಬಿದ್ದು, "ಅಮ್ಮಾ, ಪ್ರಜೆಯೊಬ್ಬನು ತನ್ನ ರಾಜನನ್ನು ಆಕ್ಷೇಪಿಸಬಹುದಾದರೆ ನಾನು ನಮ್ಮ ರಾಜನನ್ನು ಆಕ್ಷೇಪಿಸುತ್ತೇನೆ. ನನಗೊಂದು ರಾಜ್ಯವೂ ಸಿಂಹಾಸನವೂ ಇದ್ದಿದ್ದರೆ ನಾನು ಅದನ್ನು ತಮ್ಮಡಿಗೆ ಸಮರ್ಪಿಸುವವರೆಗೆ ಶಾಂತಿಯಿಂದಿರುತ್ತಿರಲಿಲ್ಲ" ಎಂದು ನಯವಾಗಿ ಮಾತನಾಡಿದನು.

ಅವನ ಹೊಗಳಿಕೆಯ ಮಾತುಗಳಿಂದ ಕೃಷ್ಣಾಕುಮಾರಿಯ ಕೋಪ ಕೊಂಚ ಇಳಿಯಿತು. ರಾಜನಿಗೆ ಬದಲಾಗಿ ರಾಯಭಾರಿಯನ್ನು ಶಿಕ್ಷಿಸಬೇಕೆಂದಿದ್ದವಳು, ಅವನನ್ನು ಮನ್ನಿಸಿ ಮನೆಗೆ ಕಳುಹಿಸಿದಳು. ಅವನು ತನ್ನನ್ನು ಬಿಟ್ಟುದೆ ಸಾಕೆಂದು ಬೇಗಬೇಗ ತನ್ನ ದೇಶಕ್ಕೆ ಹೋಗಿ ಸೇರಿಕೊಂಡನು.

ಆದರೆ ಕೃಷ್ಣಾಕುಮಾರಿಗೆ ಮಹಾಶೂರನ ಮೇಲೆ ಮಾತ್ರ ಕೋಪ ಕಡಿಮೆಯಾಗಿರಲಿಲ್ಲ. ಅವನಿಗೆ ತಕ್ಕ ಶಿಕ್ಷೆ ಮಾಡಿಸಬೇಕೆಂದು ಅವಳು ತನ್ನನ್ನು ಬಹುವಾಗಿ ಪ್ರೀತಿಸುತ್ತಿದ್ದ ಬುಗ್ಗೆಯ ಬಳಿಯ ಏಡಿಯನ್ನು ನೆನೆದಳು. ಗಂಟೆಗೆ ಹತ್ತು ಹರಿದಾರಿ ಓಡುವ ರಥದಲ್ಲಿ ಅವಳಲ್ಲಿಗೆ ಹೋದಳು. ಹೋಗಿ, ತನಗೆ ಮಹಾಶೂರನಿಂದಾದ ಅವಮಾನವನ್ನು

ಹೇಳಿಕೊಂಡಳು. ಏಡಿ ಒಂದು ಕ್ಷಣಕಾಲ ಧ್ಯಾನಮಾಡಿ, ಮಹಾ ಶೂರನು ಕೃಷ್ಣಾಕುಮಾರಿಯನ್ನು ತಿರಸ್ಕರಿಸಿದುದಕ್ಕೆ ಕಾರಣವನ್ನು ಕಂಡಿತು. ಅದುವರೆಗೆ ಅದಕ್ಕೆ ಇಚ್ಛಾದೇವಿಯ ಸಂಗತಿಯೆ ಮರೆತು ಹೋಗಿತ್ತು. ಅವಳು ಹುಟ್ಟಿದ ದಿನ ತನಗಾದ ಅವಮಾನವನ್ನು ಜ್ಞಾಪಿಸಿಕೊಂಡಿತು. ಅದರ ಮೈ ಉರಿಯಿತು. ಮಹಾಶೂರನು ಇಚ್ಛಾ ದೇವಿಯ ಮೇಲಿನ ಪ್ರೀತಿಯಿಂದಲೇ ಕೃಷ್ಣಾಕುಮಾರಿಯನ್ನು ಕಡೆ ಗಣಿಸಿದುದರಿಂದ, ಏನಾದರೂ ಮಾಡಿ ಅವರಿಗೆ ತೊಂದರೆ ಕೊಡುವೆನೆಂದು ಅದು ನಿಶ್ಚಯಮಾಡಿತು. ಅದನ್ನೇ ಕೃಷ್ಣಾಕುಮಾರಿಗೂ ತಿಳಿಸಿ, ಅವಳನ್ನು ಸಂತೈಸಿ ಕಳುಹಿಸಿತು.

ಇತ್ತ ಇಚ್ಛಾದೇವಿ ಮೂರುಹೊತ್ತೂ ಮಹಾಶೂರನ ಚಿತ್ರ ದಲ್ಲಿಯೇ ಮುಳುಗಿರುತ್ತಿದ್ದಳು. ಈ ಸಂಗತಿ ಎಲ್ಲರಿಗೂ ತಿಳಿದಿತ್ತು. ಅದರಲ್ಲೂ ಅವಳ ಸಖಿಯರಾದ ಸುಶೀಲೆ ಮತ್ತು ಕೃಶಾಂಗಿ ಎಂಬವರಿಗೆ ಅವಳ ಮನಸ್ಸು ಇನ್ನೂ ಚೆನ್ನಾಗಿ ತಿಳಿದಿತ್ತು. ಸುಶೀಲೆಗೆ ತನ್ನ ಒಡತಿಯ ಮೇಲೆ ತುಂಬಾ ಪ್ರೀತಿ. ಆದರೆ ಕೃಶಾಂಗಿಗೆ ಇಚ್ಛಾದೇವಿಯ ಸೌಂದರ್ಯವನ್ನು ಕಂಡು ಸಹಿಸಲಾರದ ಹೊಟ್ಟೆಕಿಚ್ಚು. ಕೈಲಾದರೆ ಅವಳಿಗೆ ಕೇಡು ಮಾಡಬೇಕೆಂದು ಕಾಯುತ್ತಿದ್ದಳು.

ಮಹಾಶೂರನ ತಂದೆ ಕಳುಹಿಸಿದ ಕಾಗದಗಳನ್ನು ತೆಗೆದುಕೊಂಡು ಹೊರಟ ರಾಯಭಾರಿ ಇಚ್ಛಾದೇವಿಯ ಊರಿಗೆ ಬೇಗ ಬೇಗ ಬಂದನು. ಬಂದ ಒಡನೆಯೆ, ಆಕೆಯ ತಾಯಿತಂದೆಯ ಕಾಲಿಗೆ ಬಿದ್ದು, “ ಬೇಗನೆ ರಾಜಕುಮಾರಿಯನ್ನು ಕಾಣದಿದ್ದರೆ ನನ್ನ ಯಜಮಾನನು ಸತ್ತೇ ಹೋಗುತ್ತಾನೆ” ಎಂದು ಅಳುತ್ತಾ ರಾಜಕುಮಾರನ ಸ್ಥಿತಿಯನ್ನು ತಿಳಿಸಿ ದನು. “ ಏಡಿಯ ಶಾಪ ಮುಗಿಯುವುದಕ್ಕೆ ಇನ್ನು ಮೂರೇ ತಿಂಗಳು ಮಿಕ್ಕಿರುವುದರಿಂದ ಅಂತಹ ಕೇಡೇನೂ ಆಗದು ” ಎಂದನು. “ ಅಲ್ಲದೆ, ನಿಮ್ಮಂತಹ ಮಹಾರಾಜರು ಒಂದು ಸಾಧಾರಣ ಏಡಿಯ ಮಾತಿಗೆ ಹೀಗೆ ಭಯಪಡಬಾರದು” ಎಂದು ಸೂಚಿಸಿದನು. ಆದರೂ ರಾಜನಿಗೆ ಮಗಳನ್ನು ಕಳುಹಿಸುವ ಧೈರ್ಯಬರಲಿಲ್ಲ.

ರಾಜಕುಮಾರನು ಕಾಯಿಲೆಯೆಂಬ ಸುದ್ದಿಯನ್ನು ರಾಣಿ ತನ್ನ ಮಗಳಿಗೆ ತಾನೇ ತಿಳಿಸಿದಳು. ಮಗಳು ಕಣ್ಣೀರಿಟ್ಟುದು ಕಂಡು, "ಅಳ ಬೇಡವಮ್ಮ. ಅವನ ರೋಗವನ್ನು ಪರಿಹರಿಸುವುದು ನಿನ್ನ ಕೈಯಲ್ಲೆ ಇದೆ. ಆದರೆ ನೀನು ಅವನ ಹತ್ತಿರ ಹೋಗುವಾಗ ಏಡಿ ಏನಾದರೂ ಕೇಡುಮಾಡಬಹುದೆಂದು ಹೆದರುತ್ತೇನೆ" ಎಂದಳು.

ಅದಕ್ಕೆ ರಾಜಕುಮಾರಿ "ಬಾಗಿಲು ಕಿಟಕಿಗಳು ಏನೂ ಇಲ್ಲದ ಗಾಡಿಯಲ್ಲಿ ನಾನು ಪ್ರಯಾಣ ಮಾಡಬಹುದಲ್ಲ. ರಾತ್ರಿ ಮಾತ್ರ ಗಾಡಿ ಯಿಂದ ಹೊರಗೆ ಬರುತ್ತೇನೆ. ಹಗಲೆಲ್ಲಾ ಪ್ರಯಾಣಮಾಡಿ ನಾವು ರಾಜಕುಮಾರನನ್ನು ಸೇರಬಹುದಲ್ಲ" ಎಂದಳು.

ಅವಳ ತಾಯಿತಂದೆಗೆ ಅದು ಒಳ್ಳೆಯ ಆಲೋಚನೆಯೆನ್ನಿಸಿತು. "ಇಚ್ಛಾದೇವಿ ಈ ದಿವಸವೇ ಹೊರಡುವಳೆಂದು ರಾಜಕುಮಾರನಿಗೆ ತಿಳಿಸು" ಎಂದು ಅವರು ರಾಯಭಾರಿಯನ್ನು ಕಳುಹಿಸಿಕೊಟ್ಟರು. ಕೂಡಲೆ ಅರಮನೆಯ ಕೆಲಸಗಾರನನ್ನು ಕರೆಸಿ ರಾಜಕುಮಾರಿಯ ಪ್ರಯಾಣಕ್ಕೆ ಅನುಕೂಲವಾದ ರಥವನ್ನು ಸಿದ್ಧಮಾಡಹೇಳಿದರು. ಆ ರಥ ಪೆಟ್ಟಿಗೆ ಇದ್ದಂತೆ ಇತ್ತು. ಅದಕ್ಕೆ ಬಾಗಿಲುಗಳಿದ್ದರೂ, ಬಾಗಿಲು ಗಳಿಗೆ ಬಿಗಿಯಾದ ಬೀಗ ಹಾಕಿತ್ತು. ಬೀಗದಕ್ಕೆಗಳು ಒಬ್ಬ ವಿಶೇಷ ರಾಯಭಾರಿಯ ವಶದಲ್ಲಿದ್ದುವು. ಇಚ್ಛಾದೇವಿ ಆ ರಥದಲ್ಲಿ ಹೊರಟಾಗ ಸುಶೀಲೆಯೂ ಕೃಶಾಂಗಿಯೂ ಅವಳೊಡನೆ ಹೊರಟರು. ಜೊತೆಯಲ್ಲಿ ಕೃಶಾಂಗಿಯ ತಾಯಿ ತಾನೂ ಹೊರಟಳು. ಅವಳು ಚಿಕ್ಕಂದಿನಿಂದ ಇಚ್ಛಾದೇವಿಯ ದಾದಿಯಾಗಿದ್ದವಳು. ಇತರ ಅವಶ್ಯವಾದ ಪರಿ ವಾರವೂ ಅವರೊಡನೆ ಹೊರಟಿತು.

ಮಹಾಶೂರನ ಚಿತ್ರ ಇಚ್ಛಾದೇವಿಯ ವಶಕ್ಕೆ ಬಂದಾಗಿನಿಂದ ಕೃಶಾಂಗಿಗೆ ಅವಳ ಮೇಲೆ ಹೊಟ್ಟೆಯುರಿ ಹೆಚ್ಚಿತ್ತು. ಅವಳು ರಾಜ ಕುಮಾರನನ್ನು ತಾನೇ ಮೋಹಿಸತೊಡಗಿದ್ದಳು. ಅವನಿಗೆ ಇಚ್ಛಾದೇವಿ ಯೊಡನೆ ಮದುವೆಯಾದರೆ ತಾನು ಜೀವ ಕಳೆದುಕೊಳ್ಳುವುದಾಗಿ ತಾಯಿ ಯೊಡನೆ ಹೇಳಿಕೊಂಡಳು. ಆ ತಾಯಿ, ಮಗಳ ಮೇಲಿನ ಮೋಹದಿಂದ,

ಏನಾದರೂ ಮಾಡಿ ಆ ಮದುವೆ ನಡೆಯದಂತೆ ತಡೆಯುವೆನೆಂದು ಸಮಾಧಾನಪಡಿಸಿದಳು.

ಆದರೆ ಇಚ್ಛಾದೇವಿಯ ತಾಯಿತಂದೆಗೆ ಆ ದಾದಿಯ ಮೇಲೆ ಹೆಚ್ಚು ನಂಬಿಕೆ. ಅವರು ಅವಳನ್ನು ಅನೇಕ ವರ್ಷಗಳಿಂದ ನೋಡಿದ್ದರು. ಮುಂದಿನ ಮೂರು ತಿಂಗಳ ಕಾಲ ಮಗಳ ಯೋಗಕ್ಷೇಮದ ಭಾರವನ್ನು ಅವಳಿಗೇ ವಹಿಸಿದರು. ರಾಣಿಯು ಅವಳನ್ನು ಕರೆದು, "ರಾಜಕುಮಾರಿ ಹಗಲುಬೆಳಕನ್ನು ನೋಡದಂತೆ ಜಾಗರೂಕತೆಯಿಂದಿರು. ಇದು ಏಕೆಂಬುದು ಆ ರಾಯಭಾರಿಗೂ ಗೊತ್ತು. ಅವಳಿಗೆ ಹದಿನೈದು ವರ್ಷ ತುಂಬುವವರೆಗು ಬರಿಯ ಮೇಣದಬತ್ತಿಯ ಬೆಳಕಿನಲ್ಲಿ ಮಾತ್ರ ಇರುವಂತೆ ನೋಡಿಕೊ" ಎಂದು ಪುನಃಪುನಃ ಹೇಳಿದಳು. ದಾದಿ ಅವಳ ಆಜ್ಞೆಯನ್ನು ಚಾಚೂ ತಪ್ಪದೆ ನಡೆಸುವುದಾಗಿ ಭರವಸೆ ಕೊಟ್ಟಳು. ರಾಜರಾಣಿಯರು ಅವರನ್ನು ಕಳುಹಿಸಿಕೊಟ್ಟರು.

ಪ್ರಯಾಣ ಹೊರಟ ಕಾಲದಿಂದ ಕೃಶಾಂಗಿ, ಏನಾದರೂ ಮಾಡಿ ರಾಜಕುಮಾರಿ ರಾಜಕುಮಾರನನ್ನು ಕಾಣುವುದು ತಪ್ಪಿಸೆಂದು ತನ್ನ ತಾಯಿಯನ್ನು ಪೀಡಿಸತೊಡಗಿದಳು. ಅವಳ ಪೀಡೆಯನ್ನು ತಡೆಯಲಾರದೆ, ಆ ದಾದಿ ಮಾರನೆಯ ಬೆಳಗ್ಗೆ ಒಂದು ಹರಿತವಾದ ಚೂರಿಯನ್ನು ತೆಗೆದುಕೊಂಡು ಗಾಡಿಯ ಪಕ್ಕದಲ್ಲಿ ಒಂದು ದೊಡ್ಡ ರಂಧ್ರ ಕತ್ತರಿಸಿದಳು. ಸೂರ್ಯನ ಬೆಳಕು ಗಾಡಿಯೊಳಕ್ಕೆ ನುಗ್ಗಿತು.

ಇಚ್ಛಾದೇವಿ ಅದುವರೆಗೆ ಸೂರ್ಯನ ಬೆಳಕನ್ನು ಕಂಡಿರಲಿಲ್ಲ. ಆಗ ಕಂಡು, ಅಯ್ಯೋ ಎಂದು ಕೂಗಿಕೊಂಡಳು. ಒಡನೆಯೆ ಒಂದು ಜಿಂಕೆಯಾಗಿ ಹೊರಕ್ಕೆ ಹಾರಿಹೋದಳು. ಅದನ್ನು ಕಂಡ ಪರಿವಾರದವರು ಅವಳನ್ನು ಹಿಡಿಯಲು ಬೆನ್ನಟ್ಟಿದರು. ಅದೇ ಸಮಯವನ್ನು ಕಾಯುತ್ತಿದ್ದ ಏಡಿ ಒಂದು ದೊಡ್ಡ ಬಿರುಗಾಳಿಯನ್ನು ಎಬ್ಬಿಸಿತು. ಅದರಿಂದ ಪರಿವಾರದವರು ಜಿಂಕೆಯ ಹಿಂದೆ ಹೋಗಲಾರದೆಹೋದರು. ಅವರೆಲ್ಲರೂ ಅಲೆದೂ ಅಲೆದೂ ರಾಜಕುಮಾರಿಯ ರಥದಿಂದ ದೂರವಾದರು.

ರಥದ ಹತ್ತಿರ ಉಳಿದವರು ರಾಜಕುಮಾರಿಯ ಸಖಿಯರು ಇಬ್ಬರು, ಅವಳ ದಾದಿಯೊಬ್ಬಳು. ಅವರಲ್ಲೂ ಸುಶೀಲೆ ತಾನೂ ತನ್ನ ಒಡತಿಯನ್ನು ಹುಡುಕುತ್ತ ಹೋದಳು. ಅದರಿಂದ ಕೃಶಾಂಗಿಯೂ ಅವಳ ತಾಯಿಯೂ ಮಾತ್ರ ಅಲ್ಲಿಯೆ ಉಳಿದರು. ಕೃಶಾಂಗಿ ತನ್ನ ಒಡತಿಯ ಉಡುಪು ಒಡವೆಗಳನ್ನು ತಾನೇ ಉಟ್ಟು ತೊಟ್ಟುಕೊಂಡಳು. ತನ್ನ ತಾಯಿಯನ್ನೂ ಕರೆದುಕೊಂಡು ಮಹಾಶೂರನ ಪಟ್ಟಣಕ್ಕೆ ಹೋದಳು.

ಅವರಿಬ್ಬರೂ ಪಟ್ಟಣದ ಹತ್ತಿರ ಬಂದಾಗ, ರಾಜನ ಪರಿವಾರ ದವರು ಬಂದು ಅವರನ್ನು ಎದುರುಗೊಂಡರು. ಎದುರುಗೊಂಡು, ಕುದುರೆ ಗಳಿಂದ ಇಳಿದು ಕೃಶಾಂಗಿಗೂ ಅವಳ ತಾಯಿಗೂ ನಮಸ್ಕರಿಸಿದರು. ಅವರು ಕೃಶಾಂಗಿಯನ್ನೇ ಇಚ್ಛಾದೇವಿಯೆಂದು ತಿಳಿದು ಮರ್ಯಾದೆ ಮಾಡಿದರು.

ಸ್ವಲ್ಪ ದೂರದಲ್ಲಿ ಊರಿನ ಕಡೆಯಿಂದ ಎರಡು ಪಲ್ಲಕ್ಕಿಗಳು ಬರುತ್ತಿದ್ದುವು. ಕೃಶಾಂಗಿ ಅದನ್ನು ಗಮನಿಸಿ "ಆ ಪಲ್ಲಕ್ಕಿಗಳಲ್ಲಿ ಬರುತ್ತಿರು ವವರು ಯಾರು?" ಎಂದು ಕೇಳಿದಳು.

ಅದಕ್ಕೆ ಪರಿವಾರದವರು "ರಾಜಕುಮಾರಿಯನ್ನು ಎದುರುಗೊಳ್ಳಲು ಮಹಾಶೂರನೂ ಅವನ ತಂದೆಯೂ ಬರುತ್ತಿರುವರು" ಎಂದು ತಿಳಿಸಿದರು.

"ಹಾಗಾದರೆ, ಹೋಗಿ, ಇಚ್ಛಾದೇವಿ ಬಂದಿರುವಳೆಂದು ತಿಳಿಸಿ. ದಾರಿಯಲ್ಲಿ ಬಿರುಗಾಳಿಯೆದ್ದು ನನ್ನ ಪರಿವಾರವೆಲ್ಲ ಚೆದರಿಹೋಯಿತು. ನನ್ನ ಜೊತೆಯಲ್ಲಿ ಉಳಿದು ಬಂದವಳು ಈ ನನ್ನ ದಾದಿಯೊಬ್ಬಳೆ" ಎಂದು ಕೃಶಾಂಗಿ ತನ್ನ ತಾಯಿಯನ್ನು ತೋರಿಸಿದಳು.

ಸೈನಿಕರು ಒಡನೆ ಹೋಗಿ ರಾಜನಿಗೂ ರಾಜಕುಮಾರನಿಗೂ ಅವಳು ಬಂದುದನ್ನು ತಿಳಿಸಿದರು. ಅವಳು ಅಷ್ಟು ಹಗಲಿನಲ್ಲಿ ಕಾಲು ನಡೆಯಿಂದ ಬಂದಳೆಂದು ಕೇಳಿ ರಾಜಕುಮಾರನಿಗೆ ಆಶ್ಚರ್ಯವಾಯಿತು. ಅವನು ಆಗ ಆತುರದಿಂದ "ಹೇಳಿ, ಹೇಳಿ. ಅವಳಿಗಿಂತ ಸುಂದರಿ ಯಾದವಳನ್ನು ನೀವು ಕಂಡುದುಂಟೆ?" ಎಂದು ಸೈನಿಕರನ್ನು ಕೇಳಿದನು.

ಅವರೆಲ್ಲರೂ ಏನೂ ಉತ್ತರ ಕೊಡದೆ ಸುಮ್ಮನಿರಲು, "ನೀವು ಮೌನ ದಿಂದಿರುವುದಕ್ಕೆ ನನಗೆ ಕಾರಣ ಗೊತ್ತು. ಅವಳನ್ನು ಹೊಗಳುವುದಕ್ಕೆ ಹೇಗೆ ಪ್ರಾರಂಭಿಸಬೇಕೆಂಬುದನ್ನು ನೀವು ತಿಳಿಯದಷ್ಟು ಚೆಲುವಾಗಿ ದ್ದಾಳೆ ಅವಳು" ಎಂದನು. ಅದಕ್ಕೆ ಒಬ್ಬ ಮುದಿ ಸೈನಿಕನು "ಸ್ವಾಮಿ ಯವರು ತಾವೇ ಅವಳನ್ನು ನೋಡಬೇಕು. ದೂರಪ್ರಯಾಣದಿಂದಲೂ ಬಿರುಗಾಳಿಯ ಬಾಧೆಯಿಂದಲೂ ಸ್ವಲ್ಪ ಕಂಗೆಟ್ಟಿರುವಂತೆ ಕಾಣುತ್ತದೆ" ಎಂದನು.

ಆ ವೇಳೆಗೆ ಅವರು ಕೃಶಾಂಗಿಯಿದ್ದಲ್ಲಿಗೆ ಬಂದರು. ಕೃಶಾಂಗಿ ಯನ್ನು ಕಂಡು ರಾಜನಿಗೆ ದಿಗ್ಭ್ರಾಂತಿಯಾಯಿತು. ಕೃಶಾಂಗಿಯ ತಾಯಿ ಅವನ ಮನಸ್ಸಿನಲ್ಲಿರುವುದನ್ನು ಊಹಿಸುತ್ತಾ "ಇವಳೇ ಇಚ್ಛಾ ದೇವಿ, ಮಹಾರಾಜ. ರಾಜರಾಣಿಯರ ಕಾಗದಗಳು ಇಲ್ಲಿವೆ. ರಾಜ ಕುಮಾರಿಯ ಒಡವೆಪೆಟ್ಟಿಗೆಯೂ ಇಲ್ಲೇ ಇದೆ" ಎಂದಳು. ರಾಜನಿಗೆ ಮಾತನಾಡಲು ಬಾಯೇ ಬರಲಿಲ್ಲ. ಸುಮ್ಮನೆ ಕೃಶಾಂಗಿಯನ್ನು ನೋಡುತ್ತಾ ನಿಂತುಬಿಟ್ಟನು. ನಿಜವಾಗಿ ಅವಳ ಇರುವಿಕೆ ವಿಚಿತ್ರವಾ ಗಿತ್ತು. ಇಚ್ಛಾದೇವಿಯ ಉಡುಪು ಅವಳ ಮೈಗೆ ಸಡಿಲವಾಗಿತ್ತು. ಕೃಶಾಂಗಿ ಮೈಯೆಲ್ಲ ಮೂಳೆ ಬಿಟ್ಟುಕೊಂಡಿದ್ದಳು.

ರಾಜಕುಮಾರನು ಕೂಡ ಅವಳನ್ನು ಕಂಡೊಡನೆಯೆ "ಅಪ್ಪ, ನಾನು ಮೋಸಹೋದೆ. ನನಗೆ ಕಳುಹಿಸಿದ ಚಿತ್ರದಲ್ಲಿನ ಹೆಂಗುಸು ಇವ ಳಲ್ಲ. ನಮಗೆ ವಂಚನೆಮಾಡಿದ್ದಾರೆ" ಎಂದನು.

ಕೃಶಾಂಗಿ ಅವನ ಮಾತಿಗೆ ಏನೂ ಹೆದರದೆ, "ಹಾಗೆಂದರೇನು? ಯಾರು ನಿನ್ನನ್ನು ವಂಚಿಸಿದವರು? ನನ್ನನ್ನು ಮದುವೆಯಾಗುವುದರಿಂದ ನಿನಗೇನೂ ಮೋಸವಾಗುವುದಿಲ್ಲ" ಎಂದು ಗಂಡುಬೀರಿಯಂತಾಡಿದಳು.

ಕೃಶಾಂಗಿಯ ತಾಯಿ ಕೂಡ ಸ್ವಲ್ಪವೂ ಲಜ್ಜೆಯಿಲ್ಲದೆ "ಚೆನ್ನಾ ಯಿತು, ರಾಜಕುಮಾರಿ. ನಾವು ಎಂತಹ ಪಟ್ಟಣಕ್ಕೆ ಬಂದ ಹಾಗಾ ಯಿತು! ರಾಜಮನೆತನದವರನ್ನು ಹೀಗೆಯೆ ಬರಮಾಡಿಕೊಳ್ಳುವುದು? ಇದು ನಿಮ್ಮ ತಂದೆಗೆ ತಿಳಿಯಲಿ, ತಕ್ಕದ್ದು ಮಾಡುತ್ತಾನೆ" ಎಂದಳು.

ಅದಕ್ಕೆ ಮಹಾಶೂರನು "ತಕ್ಕದ್ದು ಮಾಡಬೇಕಾದವರು ನಾವು. ಚೆಲುವಾದ ರಾಜಕುಮಾರಿಯನ್ನು ಕಳುಹಿಸುವೆನೆಂದು ಮಾತು ಕೊಟ್ಟು, ನಿಮ್ಮ ರಾಜನು ಒಂದು ಅಸ್ಥಿಪಂಜರವನ್ನು ಕಳುಹಿಸಿದ್ದಾನೆ. ಇಂತಹ ಅಪೂರ್ವವಾದ ವಸ್ತುವನ್ನು ಹದಿನೈದು ವರ್ಷಗಳಿಂದ ಬಚ್ಚಿಟ್ಟಿದ್ದುದರಲ್ಲಿ ಏನೂ ಆಶ್ಚರ್ಯವಿಲ್ಲ" ಎಂದು ಕೋಪದಿಂದ ತನ್ನ ಪಲ್ಲಕ್ಕಿಯನ್ನು ಹತ್ತಿ ಹೊರಟನು. ರಾಜನೂ ಮಗನ ಹಿಂದೆಯೆ ಹೋದನು. ಸೈನಿಕರು ಆ ಇಬ್ಬರು ಹೆಂಗುಸರನ್ನೂ ಸೆರೆಮನೆಗೆ ಸೇರಿಸಿದರು.

ಮಹಾಶೂರನ ದುಃಖ ಮಿತಿಮೀರಿತು. ಚಿತ್ರವನ್ನು ನೋಡುತ್ತಿದ್ದಷ್ಟೂ ಅವನ ದುಃಖ ಬೆಳೆಯುತ್ತಿತ್ತು. ಕಡೆಗೆ ತಾನು ಬದುಕಿರುವವರೆಗೂ ವನವಾಸಮಾಡಲು ನಿಶ್ಚಯಿಸಿದನು. ಮನಸ್ಸು ಸ್ತಿಮಿತವಾದರೆ ಪುನಃ ಹಿಂದಿರುಗುವುದಾಗಿ ತಂದೆಗೆ ಕಾಗದ ಬರೆದಿಟ್ಟು, ಮಹಾಶೂರನು ರಾಯಭಾರಿಯನ್ನೂ ಕರೆದುಕೊಂಡು ಮನೆಬಿಟ್ಟುಹೋದನು.

ಅಷ್ಟರಲ್ಲಿ ಇಚ್ಛಾದೇವಿ ಕಾಡಿಗೆ ಓಡಿಹೋಗಿ, ತನಗೆ ಆದ ಬದಲಾವಣೆಯನ್ನು ಅಲ್ಲಿ ಒಂದು ಕೆರೆಯಲ್ಲಿ ನೋಡಿಕೊಂಡಳು. ಅವಳಿಗೆ ದುಃಖ ಒತ್ತಿಬಂದಿತು. ಕಾಡುಮೃಗಗಳ ಕೈಗೆ ಸಿಕ್ಕದೆ ಅವಳು ಬದುಕುವುದು ಹೇಗೆ? ಅವಳು ಮಲಗುವುದು ಎಲ್ಲಿ? ಅವಳು ತಿನ್ನುವುದು ಏನು? ಇವೇ ಮೊದಲಾದ ಪ್ರಶ್ನೆಗಳಿಗೆ ಉತ್ತರ ತಾನಾಗಿಯೆ ಬಂದಿತು. ತಾನು ಏನು ಮಾಡುತ್ತಿರುವೆನೆಂಬುದರ ಅರಿವು ಕೂಡ ಇಲ್ಲದೆ ರಾಜಕುಮಾರಿ ಹುಲ್ಲು ತಿನ್ನಲು ಮೊದಲುಮಾಡಿದಳು. ಹುಲ್ಲು ರುಚಿಯಾಗಿತ್ತು. ಹಗಲೆಲ್ಲಾ ಅಲೆದಾಡಿ ರಾತ್ರಿ ವಿಶ್ರಾಂತಿಗಾಗಿ ಹುಲ್ಲುಗಾವಲಿನಲ್ಲಿ ಮಲಗಿದಳು. ತೋಳಗಳೂ ಸಿಂಹಗಳೂ ಕೂಗುತ್ತಿದ್ದುದರಿಂದ ಅವಳಿಗೆ ನಿದ್ರೆ ಹತ್ತಲಿಲ್ಲ. ಅನೇಕಸಲ ಭಯದಿಂದ ಬೆದರಿ ಎದ್ದಳು. ಮನುಷ್ಯರಂತೆ ಮರ ಹತ್ತಲು ಹೋದಳು. ಹೀಗೆಯೇ ರಾತ್ರಿ ಕಳೆಯಿತು.

ಮಾರನೆಯ ಬೆಳಗ್ಗೆ ಒಂದು ಏಕಾಕಿಯಾದ ಚಿಕ್ಕ ಜಿಂಕೆ ಸೂರ್ಯೋದಯವನ್ನು ನೋಡುತ್ತಾ ನಿಂತಿತ್ತು. ಅದೇ ಕಾಡಿನಲ್ಲಿ ಇನ್ನೊಬ್ಬಳು ದುಃಖದಿಂದ ದಿಕ್ಕುದಿಕ್ಕು ದಿಟ್ಟಿಸಿ ನೋಡುತ್ತಿದ್ದಳು. ಅವಳೇ ಹಗಲೂ ರಾತ್ರಿ ತನ್ನ ಒಡತಿಯನ್ನು ಹುಡುಕುತ್ತಿದ್ದ ಸುಶೀಲೆ.

ಇಚ್ಛಾದೇವಿಯ ಮೇಲೆ ಅಮಿತವಾದ ಪ್ರೀತಿಯನ್ನಿಟ್ಟಿದ್ದ ಗಂಧರ್ವಕನ್ಯೆಯಾದ ಮಲ್ಲಿಕಾದೇವಿಗೆ ರಾಣಿ ತನ್ನ ಬುದ್ಧಿವಾದವನ್ನು ಕೇಳಲಿಲ್ಲವೆಂದು ವ್ಯಸನವಾಯಿತು. ಇಚ್ಛಾದೇವಿಯೂ ಸುಶೀಲೆಯೂ ಕಾಡಿನಲ್ಲಿ ಗೋಳಾಡುವುದು ಕಂಡು ಅವಳ ಹೃದಯ ಕರಗಿತು. ಅವಳು ಅವರಿಬ್ಬರೂ ಒಟ್ಟುಗೂಡುವಂತೆ ಮಾಡಿದಳು.

ಜಿಂಕೆ ಸುಶೀಲೆಯನ್ನು ಕಂಡು ಸಂತೋಷದಿಂದ ಚಿಗಿದುಬಂದು ನಾಲಗೆಯಿಂದ ಅವಳ ಮುಖ ಕೈಗಳನ್ನು ನೆಕ್ಕತೊಡಗಿತು. ಸುಶೀಲೆಗೆ ಆ ಜಿಂಕೆಯೇ ಏಡಿಯ ಶಾಪಕ್ಕೆ ಒಳಗಾದ ತನ್ನ ಒಡತಿಯಿರಬೇಕೆಂದು ಎನ್ನಿಸಿತು.

ತಾನು ಅದರ ಜೊತೆಯಲ್ಲಿಯೇ ಸದಾ ಇರುವೆನೆಂದು ಸುಶೀಲೆ ಆ ಜಿಂಕೆಗೆ ಮಾತುಕೊಟ್ಟಳು. ಜಿಂಕೆ ಆನಂದದಿಂದ ಕುಣಿದಾಡಿತು. ಅವರು ಹಗಲೆಲ್ಲಾ ಕಾಡಿನಲ್ಲಿ ಒಟ್ಟಿಗೆ ಸುತ್ತಾಡಿದರು. ರಾತ್ರಿಯಾದಾಗ ಅವರಿಗೆ ಭಯ ಹತ್ತಿಕೊಂಡಿತು.

ಸುಶೀಲೆ "ನಾವು ಮಲಗುವುದು ಎಲ್ಲಿ? ಇಲ್ಲಿಯೇ ಇದ್ದರೆ ಕಾಡು ಮೃಗಗಳು ನಮ್ಮನ್ನು ತಿಂದುಬಿಡುತ್ತವೆ. ಕಾಡಿನಲ್ಲಿ ನೀನು ಯಾವುದೂ ಗುಡಿಸಿಲನ್ನು ಕಂಡಿಲ್ಲವೆ?" ಎಂದು ಜಿಂಕೆಯನ್ನು ಕೇಳಿದಳು.

ಜಿಂಕೆ, ಪಾಪ, ಯಾವ ಗುಡಿಸಿಲನ್ನೂ ಕಂಡಿರಲಿಲ್ಲ. ಅದರ ಕಣ್ಣಿನಿಂದ ನೀರು ಧಾರಾಕಾರವಾಗಿ ಹರಿಯಿತು. ಆಗ, ಅದರ ದುಃಖವನ್ನು ನೋಡಲಾರದೆ ಮಲ್ಲಿಕಾದೇವಿ ಅಲ್ಲಿ ಪ್ರತ್ಯಕ್ಷವಾದಳು.

ಅವಳನ್ನು ನೋಡಿ ಅವರಿಬ್ಬರೂ ಆನಂದಗೊಂಡರು. ಜಿಂಕೆ ಸಂತೋಷದಿಂದ ಅವಳ ಕೈನೆಕ್ಕಿ ಅವಳ ಮೈಮೇಲೆ ತನ್ನ ತಲೆ ಉಜ್ಜಿತು.

ಸುಶೀಲೆ ತನ್ನ ಒಡತಿಯ ಮೇಲಿನ ಶಾಪವನ್ನು ಕಳೆಯಬೇಕೆಂದು ಮಲ್ಲಿಕಾದೇವಿಯನ್ನು ಪ್ರಾರ್ಥಿಸಿದಳು. ಅದಕ್ಕೆ ಆ ದೇವಿ "ಇಲ್ಲ, ನಾನು ಇವಳನ್ನು ಮೊದಲಿನ ರೂಪಕ್ಕೆ ತರಲಾರೆ. ಆದರೆ ಇವಳು ಪ್ರತಿ ರಾತ್ರಿ ಜಿಂಕೆಯ ಆಕಾರವನ್ನು ಬಿಟ್ಟು ತನ್ನ ರೂಪವನ್ನು ಹೊಂದುವಂತೆ

ಮಾಡಬಲ್ಲೆ. ಇದನ್ನು ಸಂತೋಷದಿಂದ ಮಾಡುತ್ತೇನೆ. ಆದರೆ ಹಗಲಾದ ಗಳಿಗೆಯೆ ಇವಳು ಪುನಃ ಜಿಂಕೆಯಾಗಬೇಕು" ಎಂದಳು.

ಸದಾ ಜಿಂಕೆಯಾಗಿರುವುದಕ್ಕಿಂತ ರಾತ್ರಿಯಾದರೂ ತನ್ನ ಆಕಾರ ವನ್ನೆ ಪಡೆಯುವುದು ಎಷ್ಟೋ ವಾಸಿಯೆಂದು ಜಿಂಕೆ ಮಲ್ಲಿಕಾದೇವಿಯ ಕಾಲಿನ ಮೇಲೆ ತನ್ನ ತಲೆಯನ್ನು ಇಟ್ಟಿತು.

ಆಗ ಮಲ್ಲಿಕಾದೇವಿ " ಈ ಎದುರಿಗೆ ಕಾಣುವ ಕಾಲುದಾರಿಯನ್ನು ಅನುಸರಿಸಿ ಹೋಗಿರಿ. ಒಂದು ಚಿಕ್ಕ ಗುಡಿಸಿಲು ಸಿಕ್ಕುತ್ತದೆ. ಅಲ್ಲಿ ನೀವು ಈ ವನವಾಸ ಮುಗಿಯುವವರೆಗೆ ವಾಸಮಾಡಬಹುದು " ಎಂದು ಹೇಳಿ ಕಣ್ಮರೆಯಾದಳು.

ಅನಂತರ ಸುಶೀಲೆ ಆ ಜಿಂಕೆಯನ್ನು ಕರೆದುಕೊಂಡು ಮಲ್ಲಿಕಾ ದೇವಿ ಹೇಳಿದ ಕಾಲುದಾರಿಯಲ್ಲಿ ಹೋದಳು. ಅಲ್ಲಿ ಒಂದು ಮರದ ಗುಡಿಸಿಲು ಸಿಕ್ಕಿತು. ಗುಡಿಸಿಲ ಬಾಗಿಲಿನಲ್ಲಿ ಒಬ್ಬ ಮುದುಕಿ ಬುಟ್ಟಿ ಹೆಣೆಯುತ್ತಾ ಕುಳಿತಿದ್ದಳು.

" ಅಮ್ಮಾ, ನನಗೂ ನನ್ನ ಜಿಂಕೆಗೂ ಇರುವುದಕ್ಕೆ ಇಷ್ಟು ಸ್ಥಳ ಕೊಡುವೆಯ? " ಎಂದು ಸುಶೀಲೆ ಅವಳನ್ನು ಕೇಳಿದಳು.

" ಆಗಲಿ, ಕಂದ. ನಿನ್ನ ಜಿಂಕೆಯೊಡನೆ ನೀನೂ ಒಳಗೆ ಬಾ " ಎಂದು ಆ ಮುದುಕಿ ಅವರನ್ನು ಒಂದು ಚೆಲುವಾದ ಕೋಣೆಯೊಳಕ್ಕೆ ಕರೆದೊಯ್ದಳು. ಅಲ್ಲಿ ಎರಡು ಚಿಕ್ಕ ಹಾಸಿಗೆ ಹಾಸಿತ್ತು. ಕೋಣೆ ಬಹಳ ಚೊಕ್ಕಟವಾಗಿತ್ತು.

ರಾತ್ರಿಯಾದ ಕೂಡಲೆ ಇಚ್ಛಾದೇವಿಗೆ ಜಿಂಕೆಯ ರೂಪ ಹೋಯಿತು. ಅವಳು ತನ್ನ ಸಖಿಯನ್ನು ತಬ್ಬಿಕೊಂಡು ಮುತ್ತಿಟ್ಟಳು. ಇಬ್ಬರಿಗೂ ಹಗಲೆಲ್ಲಾ ತಿರುಗಿ ಆಯಾಸವಾಗಿತ್ತು. ಊಟವಾದ ಒಡ ನೆಯೆ ಇಬ್ಬರೂ ನಿದ್ದೆಹೋದರು. ಬೆಳಗಾಗುವ ವೇಳೆಗೆ ಏನೋ ಬಾಗಿಲು ಕೆರೆಯುವ ಶಬ್ದವನ್ನು ಕೇಳಿ, ಸುಶೀಲೆ ಎಚ್ಚರಗೊಂಡಳು. ಎದ್ದು ನೋಡಿದಳು. ಜಿಂಕೆ ಬಾಗಿಲು ತೆರೆಯೆಂದು ಕೇಳುವಂತೆ ಅಲ್ಲಿ

ನಿಂತಿತ್ತು. ಸುಶೀಲೆ ಬಾಗಿಲು ತೆರೆದಳೊ ಇಲ್ಲವೊ, ಜಿಂಕೆ ಕಾಡಿಗೆ ಓಡಿ ಹೋಯಿತು.

ಅತ್ತ ಮಹಾಶೂರನೂ ಅವನ ರಾಯಭಾರಿಯೂ ಮನೆಬಿಟ್ಟು ಅದೃಷ್ಟವಶದಿಂದ ಅದೇ ಕಾಡಿಗೆ ಬಂದರು.

ಮಹಾಶೂರನು ಸೆಕೆಯಲ್ಲಿ ಸವಾರಿಮಾಡಿ ಬಂದಿದ್ದುದರಿಂದ ದಣಿದಿದ್ದನು. ದಣಿವಾರಿಸಿಕೊಳ್ಳಲು ಮರದ ನೆರಳಿನಲ್ಲಿ ಮಲಗಿದನು. ರಾಯಭಾರಿ ಇಬ್ಬರಿಗೂ ಆಹಾರ ಹುಡುಕಲು ಹೊರಟನು. ಹತ್ತು ಹೆಜ್ಜೆ ಹೋಗುವುದರೊಳಗೆ ಅವನಿಗೆ ಮುದುಕಿಯ ಗುಡಿಸಿಲು ಸಿಕ್ಕಿತು. ಮುದುಕಿ ಇನ್ನೂ ಬಾಗಿಲಲ್ಲಿಯೇ ಕುಳಿತಿದ್ದಳು. ರಾಯಭಾರಿ ಅವಳನ್ನು ಆಹಾರ ಬೇಡಿದನು. ಅವಳು ಗುಡಿಸಿಲಿನೊಳಕ್ಕೆ ಹೋಗಿ, ಒಂದು ಬುಟ್ಟಿಯ ತುಂಬ ಹಣ್ಣುಹಂಪಲು ತಂದುಕೊಟ್ಟಳು. "ಬೇಕಾದರೆ, ನೀನೂ ನಿನ್ನ ಯಜಮಾನನೂ ಇಲ್ಲಿಯೆ ಬಂದು ತಂಗಬಹುದು" ಎಂದಳು. ರಾಯಭಾರಿ ಗುಡಿಸಿಲು ಚೊಕ್ಕಟವಾಗಿದ್ದುದನ್ನು ನೋಡಿ, ಮುದುಕಿಯ ಆತಿಥ್ಯವನ್ನು ಸ್ವೀಕರಿಸಿ, ರಾಜಕುಮಾರನನ್ನು ಕರೆತರಲು ಹೋದನು. ಅವನು ರಾಜಕುಮಾರನನ್ನು ಕರೆದುತಂದಾಗ, ಮುದುಕಿ ಅವರನ್ನು ಒಂದು ಕೋಣೆಗೆ ಒಯ್ದಳು. ಆ ಕೋಣೆ ಸುಶೀಲೆಗೂ ಅವಳ ಜಿಂಕೆಗೂ ಬಿಟ್ಟುಕೊಟ್ಟಿದ್ದ ಕೋಣೆಯ ಪಕ್ಕದಲ್ಲಿತ್ತು. ಎರಡು ಕೋಣೆಗಳಿಗೂ ನಡುವೆ ಇದ್ದ ಗೋಡೆ ಬಹಳ ತೆಳುವಾಗಿತ್ತು.

ರಾಜಕುಮಾರನಿಗೆ ರಾತ್ರಿಯೆಲ್ಲ ನಿದ್ದೆಯೇ ಬರಲಿಲ್ಲ. ಸೂರ್ಯೋದಯವಾದ ಕೂಡಲೆ ಕಾಡಿನಲ್ಲಿ ತಿರುಗಾಡಲು ಹೋದನು. ಗುರಿಯಿಲ್ಲದೆ ಅಲೆದಾಡುತ್ತಾ, ಜಿಂಕೆಯು ಕ್ಷೇಮವಾಗಿರುವೆನೆಂದು ತಿಳಿದು ಮಲಗಿದ್ದ ಕಾವಲಿಗೆ ಬಂದನು. ಅವನ ಕೈಯಲ್ಲಿ ಯಾವಾಗಲೂ ಬಿಲ್ಲು ಬಾಣ ಸಿದ್ಧವಾಗಿರುತ್ತಿತ್ತು. ಅವನು ಜಿಂಕೆಗೆ ಒಂದು ಬಾಣ ಬಿಟ್ಟನು. ಜಿಂಕೆ ಎದ್ದು ಓಡಿತು.

ಅಷ್ಟು ರಮಣೀಯವಾದ ಜಿಂಕೆಯನ್ನು ಮಹಾಶೂರನು ಅದುವರೆಗೆ ಕಂಡಿರಲಿಲ್ಲ. ಅದನ್ನು ಹಿಡಿಯಲೇಬೇಕೆಂದು ನಿಶ್ಚಯಿಸಿ ಬಾಣದ

ಹಿಂದೆ ಬಾಣ ಬಿಟ್ಟನು. ಅದನ್ನು ಕಾಡಿನ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಅಟ್ಟಿಸಿಕೊಂಡುಹೋದನು. ಅದು ಸಾಮಾನ್ಯ ಜಿಂಕೆಯಾಗಿದ್ದಿದ್ದರೆ ಸುಲಭವಾಗಿ ಸಿಕ್ಕಿಬಿಡುತ್ತಿತ್ತು. ಆದರೆ ಆ ಜಿಂಕೆಯನ್ನು ಮಲ್ಲಿಕಾದೇವಿ ತನ್ನ ರಕ್ಷಣೆಗೆ ತೆಗೆದುಕೊಂಡಿದ್ದಳು. ಅದರಿಂದ ಅದು ತಪ್ಪಿಸಿಕೊಂಡು ಓಡಿಹೋಯಿತು. ರಾಜಕುಮಾರನು ಪುನಃ ಆ ದಿನ ಅದನ್ನು ಕಾಣಲಿಲ್ಲ.

ರಾತ್ರಿಯಾಯಿತು. ಇಚ್ಛಾದೇವಿ ತನ್ನ ಸ್ತ್ರೀರೂಪವನ್ನು ಪಡೆದಳು. ತನ್ನ ಸಖಿಯನ್ನು ಕುರಿತು, "ಅಯ್ಯೋ, ಆ ಏಡಿಯೂ ಕಾಡು ಮೃಗಗಳೂ ಮಾತ್ರ ನನಗೆ ಆಗದವರೆಂದು ತಿಳಿದುಕೊಂಡಿದ್ದೆ. ಆದರೆ ಈ ದಿನ ಒಬ್ಬ ಯುವಕನು ಬೇಟೆಯಾಡುತ್ತಾ ನನ್ನ ಬೆನ್ನಟ್ಟಿ ಬಂದನು. ಅವನು ಹೇಗಿದ್ದನೆಂದು ನಿಂತು ನೋಡಲು ಕೂಡ ನನಗೆ ಸಮಯ ಸಿಕ್ಕಲಿಲ್ಲ" ಎಂದಳು.

ಸುಶೀಲೆ ತನ್ನ ಒಡತಿಯ ಕ್ಷೇಮಕ್ಕಾಗಿ ಚಿಂತೆಗೊಂಡು, "ರಾಜಕುಮಾರಿ, ನೀನು ಇನ್ನು ಇಲ್ಲಿಂದ ಹೊರಗೆ ಹೋಗತಕ್ಕದಲ್ಲ" ಎಂದಳು.

ಅದಕ್ಕೆ ಇಚ್ಛಾದೇವಿ " ನಾನು ಹೋಗಲೇಬೇಕು. ಜಿಂಕೆಯ ರೂಪ ಬಂದಮೇಲೆ ಜಿಂಕೆಯಂತೆ ನಡೆದುಕೊಳ್ಳಬೇಕು. ಅದಕ್ಕೆ ಕಾಡೇ ಸರಿಯಾದ ಸ್ಥಳ" ಎಂದು ತಿಳಿಸಿದಳು.

ಅಷ್ಟರವೇಳೆಗೆ ರಾಜಕುಮಾರನೂ ತನ್ನ ಆ ದಿನದ ಬೇಟೆಯನ್ನು ತನ್ನ ರಾಯಭಾರಿಗೆ ವಿವರಿಸುತ್ತಿದ್ದನು. "ನಾನು ಒಂದುನೂರು ಸಲ ಅದಕ್ಕೆ ಗುರಿಯಿಟ್ಟೆ. ಆದರೂ ಅದು ಬಹಳ ಚಾಕಚಕ್ಯದಿಂದ ತಪ್ಪಿಸಿಕೊಂಡಿತು. ನಾಳೆ ಪುನಃ ಅದನ್ನು ಹುಡುಕುತ್ತೇನೆ. ಸಿಕ್ಕಿದರೆ ಅದನ್ನು ತಪ್ಪಿಸಿಕೊಳ್ಳಲು ಬಿಡುವುದಿಲ್ಲ" ಎಂದನು.

ಅದರಂತೆ ರಾಜಕುಮಾರನು ಮಾರನೆಯ ಬೆಳಗ್ಗೆ ಆ ಜಿಂಕೆಯನ್ನು ಹುಡುಕುತ್ತ ಹೊರಟನು. ಜಿಂಕೆ ಅವನಿಗಿಂತ ಮುಂಚೆಯೇ ಕಾಡಿಗೆ ಹೋಗಿತ್ತು. ಆದರೂ, ಅವನು ಎಷ್ಟೇ ದೂರ ಹೋದರೂ, ಜಿಂಕೆ

ಅವನ ಕಣ್ಣಿಗೆ ಬೀಳಲಿಲ್ಲ. ಅಲೆದೂ ಅಲೆದೂ ಆಯಾಸವಾಗಿ ಅಲ್ಲಿಯೇ ಮರಗಳ ಕೆಳಗೆ ಮಲಗಿ ನಿದ್ದೆಹೋದನು.

ಆವೇಳೆಗೆ ಜಿಂಕೆ ಅವನು ಇದ್ದ ಅಲ್ಲಿಗೇ ಬಂದಿತು. ಅವನನ್ನು ದೃಷ್ಟಿಸಿ ನೋಡಿತು. ತಾನು ಅರಮನೆಯಲ್ಲಿ ಇದ್ದಾಗ ತನ್ನ ಚಿತ್ರವನ್ನು ಕಳುಹಿಸಿದ ರಾಜಕುಮಾರನು ಅವನೇ ಎಂದು ಗುರುತು ಹಿಡಿಯಿತು. ಎಚ್ಚರವಿಲ್ಲದೆ ಮಲಗಿದ್ದ ಅವನನ್ನು ನೋಡುತ್ತಾ ಅಲ್ಲಿಯೆ ಕುಳಿತು ಕೊಂಡಿತು. ಸ್ವಲ್ಪ ಹೊತ್ತಾದಮೇಲೆ ಮೆಲ್ಲನೆ ತನ್ನ ಮುಂಗಾಲು ಚಾಚಿ ಅವನನ್ನು ಮುಟ್ಟಿತು.

ರಾಜಕುಮಾರನಿಗೆ ಎಚ್ಚರವಾಯಿತು. ತಾನು ಎಷ್ಟು ಹುಡುಕಿ ದರೂ ಕಾಣದಿದ್ದ ಜಿಂಕೆಯನ್ನು ಕಂಡನು. ಏಳಬೇಕೆಂದು ಅವನು ಕೈಯೂರಿದಾಗ ಜಿಂಕೆ ಪಣಕ್ಕನೆ ಹಾರಿ ಮಾಯವಾಯಿತು. ಅವನೂ ಅಷ್ಟೇ ವೇಗದಿಂದ ಅದರ ಹಿಂದೆ ಓಡಿದನು. ಜಿಂಕೆಯೂ ಓಡಿತು. ಆದರೆ ಕೊನೆಗೆ ದಣಿದು ಮುಂದೆ ಓಡಲಾರದೆ ಒಂದುಕಡೆ ಬಿದ್ದು ಕೊಂಡಿತು. ರಾಜಕುಮಾರನು ಅಲ್ಲಿಗೆ ಬರುವವೇಳೆಗೆ ಜಿಂಕೆಗೆ ಅರ್ಧ ಜೀವವಾಗಿತ್ತು. ತನಗೆ ಸಾವು ನಿಶ್ಚಯವೆಂದು ಅದು ತಿಳಿದಿತ್ತು.

ಆದರೆ ಅದನ್ನು ಕೊಲ್ಲುವ ಬದಲು ಅವನು ಅದರ ಮೈಯನ್ನು ಸವರಿದನು. "ಚೆಲುವು ಹರಿಣೀ, ಹೆದರಬೇಡ. . ನಾನು ನಿನ್ನನ್ನು ಮನೆಗೆ ಕರೆದುಕೊಂಡುಹೋಗಿ ಕಾಪಾಡುತ್ತೇನೆ" ಎಂದು ಮೃದುವಾಗಿ ಮಾತನಾಡಿದನು. ಕೊಂಬೆಗಳನ್ನು ಕತ್ತರಿಸಿ ಒಂದು ಮಂಚ ಮಾಡಿದನು. ಮೃದುವಾದ ಎಲೆಗಳನ್ನು ಅದರ ಮೇಲೆ ಹಾಸಿ ಜಿಂಕೆಯನ್ನು ಮಲಗಿಸಿ ದನು. ಎಳೆಯ ಹುಲ್ಲನ್ನು ಆರಿಸಿ ಕಿತ್ತು ತಿನ್ನಿಸಿದನು. ತಾನು ಆಡಿದ ಮಾತು ಅದಕ್ಕೆ ಅರ್ಥವಾಗುವಂತೆ ಕಂಡುಬಂದುದರಿಂದ ಬಹಳ ಹೊತ್ತು ಅದರೊಡನೆ ಮಾತನಾಡಿದನು.

ರಾತ್ರಿ ಹತ್ತಿರ ಬಂದಂತೆಲ್ಲ ಜಿಂಕೆಗೆ ಭಯ ಹೆಚ್ಚತೊಡಗಿತು. ತನ್ನ ಪ್ರೀತಿಯ ಹೆಣ್ಣು ಹಗಲು ಜಿಂಕೆಯಾಗಿರುವಳೆಂದು ತಿಳಿದರೆ ಅವನು ಏನೆಂದುಕೊಳ್ಳುತ್ತಾನೋ ಎಂದು ಚಿಂತಿಸಿತು. ಆದರೆ ಆ ವೇಳೆಗೆ

ಅದೃಷ್ಟವಶದಿಂದ ಅವನು ಅದಕ್ಕೆ ನೀರು ತರಲುಹೋದನು. ಜಿಂಕೆ ಸದ್ದುಮಾಡದೆ ಎದ್ದು ಬೇಗಬೇಗ ಹೋಗಿ ಗುಡಿಸಿಲನ್ನು ಸೇರಿಕೊಂಡಿತು. ಅಲ್ಲಿ ತನ್ನ ಸಖಿಯ ಹತ್ತಿರ "ನನ್ನ ಪ್ರಿಯನು ಈ ಕಾಡಿನಲ್ಲಿಯೇ ಇದ್ದಾನೆ. ನೆನ್ನೆಯೂ ಈ ಹೊತ್ತೂ ನನ್ನ ಬೆನ್ನಟ್ಟಿದವನು ಅವನೇ" ಎಂದು ಹೇಳಿಕೊಂಡಿತು.

ಅದೇ ರಾತ್ರಿ ರಾಜಕುಮಾರನು ತನ್ನ ರಾಯಭಾರಿಗೆ ಆ ಕೃತಘ್ನ ವಾದ ಜಿಂಕೆಯ ವಿಷಯ ಹೇಳುತ್ತಿದ್ದನು. ಅವನ ಕೋಪವನ್ನು ಕಂಡು, ರಾಯಭಾರಿ ನಗುತ್ತ, "ಹೀಗೆ ನಂಬಿಕೆಗೆ ದ್ರೋಹ ಮಾಡಿದ ಆ ಜಿಂಕೆ ಯನ್ನು ನೀನು ಶಿಕ್ಷಿಸಲೇ ಬೇಕು" ಎಂದನು. "ಅದಕ್ಕಾಗಿಯಾದರೂ ನಾನು ಈ ಕಾಡಿನಲ್ಲೇ ನಿಲ್ಲುತ್ತೇನೆ. ಅದು ಮುಗಿದನಂತರ ನಾವು ಮುಂದೆ ಹೋಗೋಣ" ಎಂದು ರಾಜಕುಮಾರನು ದೃಢನಿಶ್ಚಯದಿಂದ ಹೇಳಿದನು.

ಮಾರನೆಯ ಬೆಳಗ್ಗೆ, ಸುಶೀಲೆ ಎಂದಿನಂತೆ ಬಾಗಿಲು ತೆರೆದಳು. ಜಿಂಕೆ ಕಾಡಿಗೆ ಓಡಿಹೋಯಿತು. ಸ್ವಲ್ಪ ಸಮಯದ ಮೇಲೆ ಜಿಂಕೆ ಯನ್ನು ಶಿಕ್ಷಿಸಬೇಕೆಂದು ರಾಜಕುಮಾರನೂ ಕಾಡಿಗೆ ಹೋದನು. ಕಾಡಿನ ಒಂದು ಹೊಸ ಭಾಗಕ್ಕೆ ಹೋದರೆ ರಾಜಕುಮಾರನ ಕಣ್ಣಿಗೆ ಬೀಳದಿರಬಹುದೆಂದು ಜಿಂಕೆ ಚಿಂತಿಸಿತು. ಕಾಡಿನಲ್ಲಿ ಹಿಂದೆ ಜಿಂಕೆ ಯನ್ನು ಕಂಡ ಸ್ಥಳಗಳಲ್ಲದೆ ಬೇರೆಯ ಸ್ಥಳಕ್ಕೆ ಹೋದರೆ ಅದನ್ನು ಕಾಣ ಬಹುದೆಂದು ರಾಜಕುಮಾರನು ಎಣಿಸಿದನು. ಹಾಗಾಗಿ ಕಾಡಿನಲ್ಲಿ ಬೇಗನೆ ಇಬ್ಬರೂ ಒಬ್ಬರನ್ನೊಬ್ಬರು ಕಂಡರು. ಕಂಡ ಕ್ಷಣ ಜಿಂಕೆ ಓಡಿತು. ರಾಜಕುಮಾರನೂ ಕಂಡ ಕ್ಷಣ ಬಾಣ ಬಿಟ್ಟನು. ಈ ಸಲ ಬಾಣ ತಗುಲಿ ಜಿಂಕೆ ಹುಲ್ಲಿನ ಮೇಲೆ ಬಿತ್ತು.

ಬಾಣ ಬಿಟ್ಟ ಒಡನೆಯೆ ಅವನಿಗೆ ಮರುಕ ಹುಟ್ಟಿತು. ಬಿಲ್ಲನ್ನು ಬಿಸಾಡಿ, ಜಿಂಕೆಯ ಗಾಯಕ್ಕೆ ಉಪಚಾರ ನಡಸಿದನು. ಅದರ ಗಾಯ ವನ್ನು ನೋಡಿ ಅತ್ತನು. ಅದನ್ನು ತಾನು ಪ್ರೀತಿಸುವೆನೆಂದು ಪುನಃ

ಪುನಃ ಹೇಳಿದನು. ಹಿಂದಿನ ದಿವಸ ತಪ್ಪಿಸಿಕೊಂಡು ಹೋದುದಕ್ಕೆ ಅದನ್ನು ಆಕ್ಷೇಪಿಸಿದನು. ಪುನಃ ತಪ್ಪಿಸಿಕೊಳ್ಳದಿರಲೆಂದು ಕತ್ತಿಗೆ ಒಂದು ಬಳ್ಳಿಯನ್ನು ಕಟ್ಟಿದನು.

ಅವನು ಅದನ್ನು ಗುಡಿಸಿಲಿಗೆ ಕರೆದೊಯ್ಯಲು ಯತ್ನಿಸಿದಾಗ, ಬಿಡಿಸಿಕೊಳ್ಳಲು ಆ ಜಿಂಕೆ ಬಹಳ ಒದ್ದಾಡಿತು. ರಾಜಕುಮಾರನು ತಾನೊಬ್ಬನೇ ಅದನ್ನು ತಡೆಯಲಾರದೆ, ಸಹಾಯಕ್ಕೆ ತನ್ನ ರಾಯಭಾರಿಯನ್ನು ಕೂಗಿಕೊಂಡನು. ಆ ಕೂಗನ್ನು ಕೇಳಿದವನು ರಾಯಭಾರಿ ಮಾತ್ರವಲ್ಲ, ಸುಶೀಲೆಯೂ ಕೇಳಿದಳು. ಅವಳೂ ಅಲ್ಲಿಗೆ ಓಡಿಬಂದು, ರಾಜಕುಮಾರನ ಕೈಯಿಂದ ಜಿಂಕೆಯನ್ನು ಬಿಡಿಸಿಕೊಂಡು ಕರೆದೊಯ್ಯಲು ಯತ್ನಿಸಿದಳು.

ಆಗ ರಾಜಕುಮಾರನು "ಅಮ್ಮಾ, ನೀವು ಹೀಗೆ ಕಳ್ಳತನ ಮಾಡಬಾರದು. ಈ ಜಿಂಕೆ ನನ್ನದು" ಎಂದು ಮರ್ಯಾದೆಯಿಂದ ಅವಳನ್ನು ತಡೆದನು.

ಅದಕ್ಕೆ ಸುಶೀಲೆ "ಸ್ವಾಮಿ, ನೀವು ತಪ್ಪು ತಿಳಿದಿದ್ದೀರೆಂದು ನನಗೆ ಎನ್ನಿಸುತ್ತದೆ. ಈ ಜಿಂಕೆ ನನ್ನದು. ಬೇಕಾದರೆ, ನೋಡಿ" ಎಂದು ಜಿಂಕೆಯ ಕತ್ತಿನಿಂದ ಬಳ್ಳಿಯನ್ನು ಕಳಚಿ, "ಬಾ, ನನ್ನ ಮುದ್ದು ಹರಿಣೀ, ಬಾ" ಎಂದು ತೋಳುಗಳನ್ನು ಚಾಚಿದಳು.

ಜಿಂಕೆ ಬಂದು ಅವಳ ತೋಳುಗಳಲ್ಲಿ ಸೇರಿಕೊಂಡಿತು. ರಾಜಕುಮಾರನು ಅವರಿಬ್ಬರಿಗೂ ಇದ್ದ ಸಲುಗೆಯನ್ನು ನೋಡಿ ಜಿಂಕೆಯನ್ನು ಅವಳಿಗೆ ಕೊಡಲು ಒಪ್ಪಿದನು. ಸುಶೀಲೆ ಜಿಂಕೆಯೊಡನೆ ಗುಡಿಸಿಲಿಗೆ ಹೋದಳು.

ರಾಜಕುಮಾರನೂ ರಾಯಭಾರಿಯೂ ಅವರ ಹಿಂದೆಯೇ ಹೋದರು. ಅವರೂ ತಾವಿದ್ದ ಗುಡಿಸಿಲಿಗೇ ಹೋದುದನ್ನು ಕಂಡು ಅವರಿಗೆ ಕುತೂಹಲವಾಯಿತು. ಅವರು ಯಾರೆಂದು ಅಲ್ಲಿದ್ದ ಮುದುಕಿಯನ್ನು ಕೇಳಿದರು. ಅವಳು ತನಗೆ ಗೊತ್ತಿಲ್ಲವೆಂದುಬಿಟ್ಟಳು.

ಆದರೆ ರಾಯಭಾರಿಯ ಕಣ್ಣು ಬಹಳ ಚುರುಕಾಗಿತ್ತು. ಅವನು "ಸ್ವಾಮಿ, ನಾನು ಈ ಹೆಂಗುಸನ್ನು ನೋಡಿದ್ದೇನೆ. ಇವಳು ಇಚ್ಛಾ ದೇವಿಯ ಪ್ರಿಯಸಖಿಯಾಗಿದ್ದವಳು" ಎಂದನು.

"ನನಗೆ ಪುನಃ ಆ ಹೆಸರು ಹೇಳಬೇಡ. ಆ ದುಃಖವನ್ನು ಮರೆಯುವುದಕ್ಕೋಸ್ಕರವೇ ನಾನು ಈ ಕಾಡಿಗೆ ಬಂದದ್ದು" ಎಂದು ರಾಜಕುಮಾರನು ಕಣ್ಣಿನಲ್ಲಿ ನೀರು ತುಂಬಿಕೊಂಡು ಹೇಳಿದನು.

ರಾಯಭಾರಿ ಅಷ್ಟಕ್ಕೇ ಸುಮ್ಮನಾಗಲಿಲ್ಲ. ಅದನ್ನು ಇನ್ನೂ ಪರೀಕ್ಷೆಮಾಡಬೇಕೆಂದು ಎರಡೂ ಕೊಠಡಿಗಳ ನಡುವೆಯಿದ್ದ ತೆಳುವಾದ ಗೋಡೆಯಲ್ಲಿ ಒಂದು ಸಣ್ಣ ರಂಧ್ರ ಕೊರೆದು ನೋಡಿದನು. ಅಲ್ಲಿ ಅತ್ಯಂತ ಸುಂದರಿಯಾದ ರಾಜಕುಮಾರಿಯನ್ನು ಕಂಡು ವಿಸ್ಮಯಗೊಂಡನು. ಅವಳ ತಲೆಗೂದಲು ನೆಲದವರೆಗೂ ಇಳಿಬಿದ್ದಿತ್ತು. ಕೆಂಪು ಕೆನ್ನೆ, ಹಾಲುಗಲ್ಲ, ಫಳಫಳನೆ ಕಣ್ಣು ಕಂಡುಬಂದಿತು. ಅವಳ ತೋಳಿನ ಗಾಯದಿಂದ ಹರಿಯುತ್ತಿದ್ದ ರಕ್ತವನ್ನು ಸುಶೀಲೆ ತಡೆದು ಕಟ್ಟುತ್ತಿದ್ದಳು.

ರಾಯಭಾರಿ ಆ ದೃಶ್ಯವನ್ನು ನೋಡುತ್ತಿದ್ದಾಗಲೇ ಆ ರಾಜಕುಮಾರಿ "ಅಯ್ಯೋ ಬಿಡು, ಸಖಿ. ಹೀಗೆ ಬದುಕಿರುವುದಕ್ಕಿಂತ ಸಾಯುವುದೇ ವಾಸಿ. ಹಗಲೆಲ್ಲಾ ಜಿಂಕೆಯಾಗಿದ್ದು, ಪ್ರಿಯನನ್ನು ಕಂಡರೂ ಅವನೊಡನೆ ಮಾತನಾಡಲಾರದೆ, ನನ್ನ ಶಾಪವನ್ನು ತಿಳಿಸಲಾರದೆ ಬದುಕಿರುವುದಕ್ಕಿಂತ ಸಾವೇ ವಾಸಿ" ಎಂದಳು.

ಆ ಮಾತು ಕೇಳಿ ರಾಯಭಾರಿಗೆ ಹಿಡಿಸಲಾರದಷ್ಟು ಆನಂದವಾಯಿತು. ಕಣ್ಣೀರು ಸುರಿಸುತ್ತಾ ಕಿಟಕಿಯ ಬಳಿಯಲ್ಲಿ ಕುಳಿತಿದ್ದ ರಾಜಕುಮಾರನನ್ನು ಕರೆದು, "ಸ್ವಾಮಿ, ಈ ರಂಧ್ರದ ಮೂಲಕ ನೋಡಬೇಕು. ತಮ್ಮ ಇಚ್ಛಾದೇವಿ ಅಲ್ಲಿದ್ದಾರೆ" ಎಂದನು. ರಾಜಕುಮಾರನು ನೋಡಿದನು. ತನ್ನ ಕಣ್ಣುಗಳನ್ನು ತಾನೇ ನಂಬಲಾರದೆ ಹೋದನು.

ಕೊನೆಗೆ, ತಾನು ನೋಡಿದುದು ನಿಜವೇ ಎಂಬುದನ್ನು ತಿಳಿಯುವುದಕ್ಕಾಗಿ ಹೋಗಿ ಪಕ್ಕದ ಕೋಣೆಯ ಬಾಗಿಲು ತಟ್ಟಿದನು.

ಸುಶೀಲೆಯು ಮುದುಕಿ ಬಂದಿರಬಹುದೆಂದು ಬಾಗಿಲು ತೆರೆದಳು. ರಾಜ ಕುಮಾರನು ಬಂದುದನ್ನು ಕಂಡು, ನಮಸ್ಕಾರಮಾಡಿದಳು. ರಾಜ ಕುಮಾರನು ಇಚ್ಛಾದೇವಿಯನ್ನು ಕಂಡನು. ಅವಳೂ ಅವನನ್ನು ಕಣ್ಣಾರೆ ಕಂಡಳು. ಯಾರೂ ಏನೂ ಮಾತನಾಡಲಿಲ್ಲ.

ರಾತ್ರಿ ಕಳೆದು ಹಗಲಾಯಿತು. ಇಚ್ಛಾದೇವಿ ಪುನಃ ಜಿಂಕೆ ಯಾಗಲಿಲ್ಲ. ಅವಳಿಗೆ ಬಹಳ ಆನಂದವಾಯಿತು. ಆಗ ತಾನು ಏಡಿಯ ಶಾಪದಿಂದ ಪಟ್ಟ ಪಾಡೆಲ್ಲವನ್ನೂ ತನ್ನ ರಾಜಕುಮಾರನಿಗೆ ತಿಳಿಸಿದಳು. ಅವಳು ತನ್ನ ಕತೆಯನ್ನು ಕೊನೆಗಾಣಿಸುವ ವೇಳೆಗೆ ಸರಿಯಾಗಿ ಗುಡಿಸಿಲ ಮುದುಕಿ ಬಂದು, "ಮಕ್ಕಳೆ, ನಿಮ್ಮ ಶಾಪ ಇಲ್ಲಿಗೆ ಮುಗಿಯಿತು" ಎಂದಳು. ಆಗ, ಅವಳೇ ಮಲ್ಲಿಕಾದೇವಿಯೆಂದು ಎಲ್ಲರಿಗೂ ಗೊತ್ತಾಯಿತು.

ಕೃಶಾಂಗಿಯೂ ಅವಳ ತಾಯಿಯೂ ತನಗೆ ಮೋಸಮಾಡಲು ಯತ್ನಿಸಿದುದನ್ನು ಮಹಾಶೂರನು ರಾಜಕುಮಾರಿಗೆ ಹೇಳಿದನು. ನಿಜ ಸ್ಥಿತಿಯನ್ನು ತಿಳಿಯದೆ ತನ್ನ ತಂದೆ ಇಚ್ಛಾದೇವಿಯ ತಂದೆಯೊಡನೆ ಯುದ್ಧಮಾಡಲು ನಿಶ್ಚಯಿಸಿರುವುದನ್ನೂ ತಿಳಿಸಿದನು. ಬೇಗನೆ ಹೋಗಿ ತನ್ನ ತಂದೆಯನ್ನು ತಡೆಯಬೇಕೆಂದು ಎದ್ದನು.

ಆ ವೇಳೆಗೆ ಅವನ ತಂದೆಯೇ ಸಕಲ ಸೇನೆಯೊಡನೆ ಅದೇ ಕಾಡಿಗೆ ಬಂದನು. ಮಹಾಶೂರನನ್ನು ಪುನಃ ಕಂಡು ಎಲ್ಲರಿಗೂ ಆನಂದ ವಾಯಿತು. ರಾಜನಂತೂ ಆನಂದ ಅಧಿಕವಾಗಿ ಮೂಕನಂತೆ ನಿಂತು ಬಿಟ್ಟನು.

ರಾಜಕುಮಾರನು ತಂದೆಗೆ ನಮಸ್ಕಾರಮಾಡಲು ಮುಂದೆ ಹೋದಾಗ, ಮಲ್ಲಿಕಾದೇವಿ ಇಚ್ಛಾದೇವಿಯ ಗಾಯದ ಮೇಲೆ ತನ್ನ ಕೈಯಿಟ್ಟಳು. ಅದು ಆಗಲೆ ಗುಣವಾಯಿತು. ಮಲ್ಲಿಕಾದೇವಿಯ ಪ್ರಭಾವದಿಂದ ರಾಜಕುಮಾರಿಗೂ ಸುಶೀಲೆಗೂ ಒಳ್ಳೆಯ ಉಡುಪು ಸಿದ್ಧವಾಯಿತು. ಅವರಿಗಾಗಿ ಒಂದು ದಿವ್ಯವಾದ ರಥವೂ ಪ್ರತ್ಯಕ್ಷ ವಾಯಿತು. ರಾಜನು ಇಚ್ಛಾದೇವಿಯನ್ನು ವಿಶ್ವಾಸದಿಂದ ಮಾತ

ನಾಡಿಸಿದನು. ರಾಜಕುಮಾರನೊಡನೆ ಅವಳ ವಿವಾಹವು ಬೇಗನೆ ನಡೆಯಬೇಕೆಂದೂ, ತನ್ನ ರಾಜ್ಯಕ್ಕೆ ಅವನೇ ರಾಜನಾಗಬೇಕೆಂದೂ ಇಷ್ಟಪಟ್ಟನು.

ಇಚ್ಛಾದೇವಿಯೂ ಮರ್ಯಾದೆಯಿಂದ ಮಾವನಿಗೆ ಉತ್ತರಕೊಟ್ಟಳು. ಕೃಶಾಂಗಿಯನ್ನೂ ಅವಳ ತಾಯಿಯನ್ನೂ ಕ್ಷಮಿಸಬೇಕೆಂದು ಕೇಳಿಕೊಂಡಳು. ರಾಜನೂ ಅದಕ್ಕೆ ಒಪ್ಪಿದನು. ಎಲ್ಲರೂ ಊರಿಗೆ ತೆರಳಿದರು.

ಮದುವೆ ವಿಶೇಷ ವೈಭವದಿಂದ ನಡೆಯಿತು. ಇಚ್ಛಾದೇವಿ ಹುಟ್ಟಿದ ದಿವಸ ಬಂದಿದ್ದ ಆರು ಜನ ಗಂಧರ್ವಕನ್ಯೆಯರೂ ಮದುವೆಗೆ ಬಂದಿದ್ದರು. ಎಲ್ಲರೂ ಅವಳಿಗೆ ಎಲ್ಲಾ ಸೌಭಾಗ್ಯಗಳನ್ನೂ ಅನುಗ್ರಹಿಸಿದರು.

ಈ ನಡುವೆ, ರಾಜಕುಮಾರನೊಡನೆ ವನವಾಸಹೋಗಿದ್ದ ರಾಯಭಾರಿ ತಾನು ಸುಶೀಲೆಯನ್ನು ಮದುವೆಯಾಗಲು ಅಪ್ಪಣೆ ಕೇಳಿದನು. ರಾಜಕುಮಾರನು ಸಂತೋಷದಿಂದ ಅವನಿಗೆ ಅಪ್ಪಣೆ ಕೊಟ್ಟು, ರಾಜ್ಯದ ಒಂದು ಭಾಗಕ್ಕೆ ಅವನನ್ನು ಮುಖ್ಯಾಧಿಕಾರಿಯಾಗಿ ನೇಮಿಸಿದನು.

ಹೀಗೆ, ಮಹಾಶೂರನು ಇಚ್ಛಾದೇವಿಯೊಡನೆಯೂ, ಅವನ ರಾಯಭಾರಿಯು ಸುಶೀಲೆಯೊಡನೆಯೂ ಸುಖವಾಗಿದ್ದರು.

# ರಾಯನರಿ

## ೧

ಹಿಂದೆ ಒಂದು ಸಲ ಸುಗ್ಗಿಯಕಾಲ ಬಂದಾಗ ಮೃಗರಾಜನಾದ ಸಿಂಹ ಕಾಡಿನಲ್ಲಿ ಸಭೆ ನಡಸಿತು. ಆ ಸಭೆಗೆ ಕಾಡಿನ ಎಲ್ಲಾ ಪ್ರಾಣಿಗಳೂ ಬಂದೇತೀರಬೇಕೆಂದು ಆಜ್ಞೆಮಾಡಿತು. ಬರದೆ ಹಿಂದೆ ಉಳಿದವರಿಗೆ ತೀಕ್ಷ್ಣವಾದ ಶಿಕ್ಷೆ ವಿಧಿಸುವೆನೆಂದು ಡಂಗುರ ಹೊಯಿಸಿತು.

ಡಂಗುರ ಹುಯಿಸಿದ ಕೆಲವೇ ದಿನಗಳಲ್ಲಿ ಕಾಡಿನ ಪ್ರಾಣಿಗಳೆಲ್ಲವೂ ಸಿಂಹವಿದ್ದಲ್ಲಿಗೆ ಬರತೊಡಗಿದವು. ಹುಲಿ, ಚಿರತೆ, ಕಿರುಬ, ಆನೆ, ಖಡ್ಗಮೃಗ, ಕರಡಿ, ತೋಳ, ಜಿಂಕೆ, ಕಾಡುಕೋಣ ಮೊದಲಾದ ದೊಡ್ಡ ಪ್ರಾಣಿಗಳೂ ಆಡು, ಟಗರು, ಮೇಕೆ, ನಾಯಿ, ಬೆಕ್ಕು, ಮೊಲ, ಅಳಿಲು ಮುಂತಾದ ಸಣ್ಣ ಪ್ರಾಣಿಗಳೂ ಗುಂಪುಗುಂಪಾಗಿ ಬಂದು ಸೇರಿದುವು. ತಾವೇ ಬರಲು ಆಗದಿದ್ದ ಪ್ರಾಣಿಗಳು ತಮ್ಮ ಪ್ರತಿನಿಧಿಗಳನ್ನು ಕಳುಹಿಸಿದ್ದುವು. ಆದರೆ ಕಾಡಿನ ನರಿಗಳಲ್ಲೆಲ್ಲ ಪ್ರಸಿದ್ಧವಾದ **ರಾಯನರಿ**ಯು ತಾನೂ ಬರಲಿಲ್ಲ, ತನ್ನ ಪ್ರತಿನಿಧಿಯನ್ನೂ ಕಳುಹಿಸಲಿಲ್ಲ. ಏಕೆಂದರೆ, ತಾನು ಬಂದರೆ ತನ್ನ ಅನೇಕ ಕೆಟ್ಟ ಕೆಲಸಗಳಿಗೆ ತಕ್ಕ ಶಿಕ್ಷೆಯಾಗುವುದೆಂದು ಅದಕ್ಕೆ ಚೆನ್ನಾಗಿ ಗೊತ್ತಿತ್ತು.

ಸಿಂಹದ ಸಭೆ ಸೇರಿತು. ಸಭೆಗೆ ಬಂದ ಪ್ರತಿಯೊಂದು ಪ್ರಾಣಿಯೂ ರಾಯನರಿಯ ಮೇಲೆ ಒಂದೊಂದು ದೂರು ತಂದಿತ್ತು. ತಮ್ಮ ತಮ್ಮ ದೂರುಗಳನ್ನು ಹೇಳಿಕೊಳ್ಳಲು ಸಿಂಹವು ಅಪ್ಪಣೆ ಕೊಟ್ಟಾಗ ಒಂದು ಭಾರಿ ತೋಳ ಮೊದಲು ಎದ್ದಿತು.

"ಮಹಾಪ್ರಭು ! ರಾಯನರಿ ನನಗೆ ಬಹಳ ಅನ್ಯಾಯಮಾಡಿದೆ. ದಯಮಾಡಿ ನನ್ನಮೇಲೆ ಕನಿಕರ ತೋರಿಸಿ ಆ ರಾಯನರಿಯನ್ನು ಶಿಕ್ಷಿಸಬೇಕು. ಅದು, ಒಂದುಸಲ ನಾನು ಮನೆಯಲ್ಲಿಲ್ಲದಾಗ ಬಂದು, ನನ್ನ ಮಕ್ಕಳ ಕಣ್ಣುಗಳನ್ನು ಚುಚ್ಚಿ ಕುರುಡುಮಾಡಿಬಿಟ್ಟಿತು. ತಡೆಯುವುದಕ್ಕೆ ಬಂದ ನನ್ನ ಹೆಂಡತಿಯ ತಲೆಯಮೇಲೆ ಬಲವಾಗಿ ಏಟು

ಹೊಡೆಯಿತು. ಆ ರಾಯನರಿ ಮಾಡಿದ ಇನ್ನೂ ಇತರ ಅನ್ಯಾಯ ಗಳನ್ನು ವಿವರಿಸುವುದಕ್ಕೆ ಹೊತ್ತೇ ಸಾಲದು" ಎಂದು ತೋಳ ಪ್ರಾರಂಭಿಸಿತು.

ತೋಳ ತನ್ನ ಮಾತನ್ನು ಇನ್ನೂ ಮುಗಿಸಿರಲಿಲ್ಲ. ಅಷ್ಟರಲ್ಲಿಯೆ ಒಂದು ಗಡವನಾಯಿ ಮುಂದೆ ಬಂದು "ಮಹಾರಾಜ! ನನ್ನ ದೂರನ್ನೂ ಲಾಲಿಸಬೇಕು. ಕಳೆದ ಚಳಿಗಾಲದಲ್ಲಿ ಆಹಾರ ಸಿಕ್ಕುವುದೇ ಕಷ್ಟ ವಾಗಿತ್ತೆಂಬುದು ತಮಗೂ ತಿಳಿದೇ ಇದೆ. ಆಗ ಒಂದು ದಿನ ನಾನು ಬಹಳ ಕಷ್ಟಪಟ್ಟು ಒಂದು ದೋಸೆಯ ಚೂರನ್ನು ಸಂಪಾದಿಸಿದ್ದೆ. ಅದನ್ನು ಆ ರಾಯನರಿ ನನ್ನಿಂದ ಕಿತ್ತುಕೊಂಡುಬಿಟ್ಟಿತು. ಅದನ್ನು ಶಿಕ್ಷಿಸಬೇಕು, ಮಹಾರಾಜ" ಎಂದು ಬೇಡಿಕೊಂಡಿತು.

ನಾಯಿ ಆ ಮಾತು ಹೇಳಿತೊ ಇಲ್ಲವೊ, ಪ್ರಾಣಿಗಳ ಗುಂಪಿನಿಂದ ಒಂದು ಕರಿಯ ಬೆಕ್ಕು ಸಿರ್‍ರೆಂದು ಸದ್ದುಮಾಡುತ್ತ ನೆಗೆದು ನಾಯಿಯ ಪಕ್ಕದಲ್ಲಿ ನಿಂತಿತು. ಅಲ್ಲಿ ನಿಂತುಕೊಂಡು, ನಾಯಿಯನ್ನು ನುಂಗಿ ಬಿಡುವಂತೆ ನೋಡುತ್ತಾ ಸಿಂಹದ ಕಡೆ ತಿರುಗಿ, "ಮೃಗರಾಜ, ಇಲ್ಲಿ ಸೇರಿರುವ ಮೃಗಗಳೆಲ್ಲ ರಾಯನರಿಯ ಮೇಲೆ ದೂರು ಹೇಳಲು ಸಿದ್ಧ ವಾಗಿವೆ. ಆದರೆ ಪ್ರತಿ ಪ್ರಾಣಿಯೂ ಮೊದಲು ತಾನು ತನ್ನನ್ನು ಪರೀಕ್ಷೆ ಮಾಡಿಕೊಳ್ಳಲಿ. ರಾಯನರಿಯ ಪಾಪಗಳಿಗಿಂತ ಹೆಚ್ಚಿನ ಪಾಪಗಳು ಅವುಗಳಲ್ಲಿಯೇ ಕಂಡುಬರುತ್ತವೆ. ತನ್ನ ದೋಸೆಯನ್ನು ರಾಯನರಿ ಕಿತ್ತುಕೊಂಡಿತೆಂದು ನಾಯಿ ಹೇಳಿತಲ್ಲ—ಆ ದೋಸೆ ಇದಕ್ಕೆಲ್ಲಿ ಸಿಕ್ಕಿ ತೆಂದು ನಾನು ಕೇಳುತ್ತೇನೆ. ಈ ನಾಯಿ ನನ್ನ ದೋಸೆಯನ್ನಲ್ಲವೆ ಕಿತ್ತುಕೊಂಡದ್ದು? ನಾನು ಅದನ್ನು ಊರಿನಲ್ಲಿ ಮನೆಯವರೆಲ್ಲ ಮಲಗಿರು ವಾಗ ಕಷ್ಟಪಟ್ಟು ಸಂಪಾದಿಸಿಕೊಂಡು ಬರಲಿಲ್ಲವೆ? ಆದರೂ ನಾಯಿಯ ಮೇಲೆ ನಾನೇನು ದೂರು ತಂದೆನೆ?" ಎಂದಿತು.

ಆ ಕರಿಯಬೆಕ್ಕಿನ ಆಕ್ಷೇಪಣೆಗೆ ಉತ್ತರ ಹೇಳಲು ಒಂದು ಕಿರುಬ ಮುಂದೆ ಬಂದು, "ಏನೆಂದೆ, ಬೆಕ್ಕೆ? ರಾಯನರಿಯ ಮೇಲೆ ದೂರು ಹೇಳ ಬಾರದು ಎನ್ನುವೆಯೊ? ರಾಯನರಿಯಂತಹ ಕಳ್ಳನೂ ಕೊಲೆಪಾತ ಕನೂ ಜಗತ್ತಿನಲ್ಲೆ ಇಲ್ಲವೆಂಬುದು ಎಲ್ಲರಿಗೂ ಗೊತ್ತು. ರಾಯನರಿಗೆ

ಯಾವಪ್ರಾಣಿಯನ್ನು ಕಂಡರೆ ವಿಶ್ವಾಸವಿದೆ? ರಾಜನಾದ ಸಿಂಹವನ್ನು ಕಂಡರೂ ಅದಕ್ಕೆ ಭಯವಿಲ್ಲ. ಒಂದು ಕೋಳಿಯ ಕಾಲು ಸಿಕ್ಕುವುದಾದರೆ ಅದು ಏನು ಮಾಡುವುದಕ್ಕೂ ಹೇಸುವುದಿಲ್ಲ. ನೆನ್ನೆ ತಾನೆ ಮಹಾಸ್ವಾಮಿಯವರ ಸೇವಕನಾದ ಈ ಮೊಲಕ್ಕೆ ರಾಯನರಿ ಏನುಮಾಡಿತೆಂದು ಹೇಳುತ್ತೇನೆ. ಮೊಲಕ್ಕೆ ಸಂಗೀತ ಹಾಡಲು ಹೇಳಿಕೊಡುತ್ತೇನೆಂದು ನಂಬಿಸಿ, ರಾಯನರಿ ಅದನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡಿತು. ಮೊಲ ಹಾಡಲು ಪ್ರಯತ್ನಿಸುತ್ತಿದ್ದಾಗ ರಾಯನರಿ ಅದರ ಕತ್ತು ಹಿಡಿದು ಬಲವಾಗಿ ಹಿಸುಕತೊಡಗಿತು. ಆ ವೇಳೆಗೆ ನಾನು ಅಲ್ಲಿಗೆ ಬರದೆ ಇದ್ದಿದ್ದರೆ ಮೊಲದ ಕತೆ ಮುಗಿದುಹೋಗುತ್ತಿತ್ತು. ನನ್ನ ಮುಖ ಕಂಡು ರಾಯನರಿ ಮೊಲವನ್ನು ಬಿಟ್ಟು ಓಡಿಹೋಯಿತು. ಮೊಲದ ಕತ್ತು ನೋಡಿ; ಇನ್ನೂ ಗಾಯ ಹಾಗೆಯೇ ಇದೆ. ಮಹಾಸ್ವಾಮಿ, ತಮ್ಮ ನಿಯಮಗಳನ್ನು ಲಕ್ಷಿಸದೆ ಕಾಡಿನ ನೆಮ್ಮದಿಗೆ ಭಂಗತಂದಿರುವ ರಾಯನರಿಯನ್ನು ಹೀಗೇ ಶಿಕ್ಷಿಸದೆ ಬಿಡಬಾರದು" ಎಂದಿತು.

ಆ ಮಾತಿಗೆ ತೋಳ ಚಪ್ಪಾಳೆ ತಟ್ಟಿ, "ಚೆನ್ನಾಗಿ ಹೇಳಿದೆ, ಕಿರುಬ. ಕಾಡಿನಲ್ಲಿ ನಾವು ನೆಮ್ಮದಿಯಿಂದ ಇರಬೇಕಾದರೆ ರಾಯನರಿಗೆ ತಕ್ಕ ಶಿಕ್ಷೆಯಾಗಲೇಬೇಕು" ಎಂದು ಕೂಗಿಕೊಂಡಿತು.

ಆಗ, ರಾಯನರಿಯ ಹತ್ತಿರದ ಸಂಬಂಧಿಯಾದ ಒಂದು ಮುದಿ ಹೋತ ಗಂಭೀರವಾಗಿ ಎದ್ದು, "ತೋಳ, ನಿನಗೆ ಹೊಟ್ಟೆಯಕಿಚ್ಚು ಹೆಚ್ಚು. ಅನ್ಯಾಯ ಮಾಡುವುದರಲ್ಲಿ ರಾಯನರಿಗಿಂತ ನೀನೇನು ಕಡಮೆ? ನೀನು ರಾಯನರಿಯನ್ನು ಎಷ್ಟು ಸಲ ಕಚ್ಚಿಲ್ಲ? ಪರಚಿಲ್ಲ? ನೀನು ರಾಯನರಿಗೆ ಮಾಡಿದ ಮೀನಿನ ಮೋಸ ಮರೆತುಬಿಟ್ಟೆಯೇನು? ರಾಯನರಿ ಮೀನಿನ ಗಾಡಿಯ ಮೇಲೆ ಹತ್ತಿ ಮೀನುಗಳನ್ನು ಎಸೆದಾಗ, ನೀನು ಹಿಂದುಗಡೆ ಬಂದು ಆ ಮೀನುಗಳೆಲ್ಲವನ್ನೂ ತಿಂದೆಯೇ ಹೊರತು, ರಾಯನರಿಗೆ ಏನಾದರೂ ಕೊಟ್ಟೆಯ? ಹೌದು, ಹೌದು, ನೀನು ತಿನ್ನಲಾಗದ ಮೀನುಮೂಳೆಗಳನ್ನು ಮಾತ್ರ ಕೊಟ್ಟೆ. ಇನ್ನೊಂದು ಸಲ, ರಾಯನರಿ ಬಹಳ ಕಷ್ಟಪಟ್ಟು ಸಂಪಾದಿಸಿದ ಹಂದಿಯ ಮಾಂಸವನ್ನೂ ಹೀಗೆಯೇ ನೀನೊಬ್ಬನೇ ನುಂಗಿಬಿಡಲಿಲ್ಲವೆ? ನಿನಗೆ ರಾಯನರಿಯ

ಮೇಲೆ ದೂರುಹೇಳುವ ಧೈರ್ಯ ಬಂದದ್ದೆ ಆಶ್ಚರ್ಯ!" ಎಂದು ಹೇಳಿ, ಮೊಲದ ಕಡೆ ತಿರುಗಿ, "ಮೊಲಕ್ಕೆ ಕತ್ತಿನ ಬಳಿ ಗಾಯವಾಯಿತಂತೆ! ಅದಕ್ಕೆ ರಾಯನರಿಯನ್ನು ಶಿಕ್ಷಿಸಬೇಕಂತೆ! ಶಿಷ್ಯನು ಸರಿಯಾಗಿ ಪಾಠ ಕಲಿಯದೆ ಹೋದರೆ ಗುರು ಅವನನ್ನು ಶಿಕ್ಷಿಸಬಾರದೆ?" ಎಂದು ನಾಯಿಯನ್ನು ಕುರಿತು, "ಕಳ್ಳನಿಂದ ಕದ್ದ ವಸ್ತುವನ್ನು ಕಿತ್ತುಕೊಂಡರೆ ಅದನ್ನು ಅಪರಾಧವೆಂದು ಹೇಳಬಹುದೆ? ನಾಯಿ ಬಾಯಿ ಮುಚ್ಚಿಕೊಂಡಿದ್ದರೆ ಚೆನ್ನಾಗಿರುತ್ತಿತ್ತು" ಎಂದು ರಾಯನರಿಯ ಪರವಾಗಿ ನಾಲ್ಕು ಮಾತ ನಾಡಿತು.

ಹೋತ ಹೀಗೆ ಮಾತನಾಡುತ್ತಿರುವಾಗಲೇ ಸಿಂಹದ ಸಭೆಗೆ ಒಂದು ಕೆಂಪು ಹುಂಜ ಬಂದಿತು. ಅದು ಒಂದು ಕೋಳಿಯ ಹೆಣವನ್ನು ಹೊತ್ತುಕೊಂಡು ಬಂದಿತು. ಆ ಹೆಣದ ಪಕ್ಕದಲ್ಲಿ ಇನ್ನೆರಡು ಕೋಳಿಗಳು ಕಣ್ಣೀರು ಸುರಿಸುತ್ತಾ ಬಂದವು. ಅವು ಆ ಸತ್ತ ಕೋಳಿಯ ಅಕ್ಕ ತಂಗಿಯರು. ಆ ಸತ್ತ ಕೋಳಿ ರಾಯನರಿಯ ಬಾಯಿಗೆ ಸಿಕ್ಕಿ ಪ್ರಾಣ ಬಿಟ್ಟಿತ್ತು.

ಕೆಂಪು ಹುಂಜ ತಾನು ಹೊತ್ತ ಹೆಣವನ್ನು ಸಿಂಹದ ಮುಂದೆ ಇಳಿಸಿ, "ವನರಾಜ, ನನ್ನ ಗೋಳನ್ನು ಲಾಲಿಸಬೇಕು. ಈಗ ಆರು ತಿಂಗಳ ಹಿಂದೆ ನನಗೆ ಎಂಟು ಗಂಡುಮಕ್ಕಳೂ ಏಳು ಹೆಣ್ಣುಮಕ್ಕಳೂ ಇದ್ದರು. ಅವರೆಲ್ಲರೂ ಒಂದೇ ಅಂಗಳದಲ್ಲಿ ಆಟವಾಡುತ್ತಿದ್ದರು. ಅಂಗಳದ ಸುತ್ತ ಎತ್ತರವಾದ ಗೋಡೆಯಿತ್ತು, ಆರು ನಾಯಿಗಳ ಕಾವಲಿತ್ತು. ಒಂದು ದಿನ ರಾಯನರಿ ಸಂನ್ಯಾಸಿಯ ಬಟ್ಟೆ ಹಾಕಿಕೊಂಡು ತಮ್ಮ ಹೆಸರು ಹೇಳಿ ನನಗೊಂದು ಪತ್ರ ತಂದಿತು. ಆ ಪತ್ರಕ್ಕೆ ತಮ್ಮ ಮುದ್ರೆ ಒತ್ತಿತ್ತು. ದೇಶದ ಪ್ರಾಣಿಗಳಿಗೆಲ್ಲಾ ತಾವು ಅಭಯವನ್ನು ದಯಪಾಲಿಸಿದಂತೆಯೂ ಒಂದು ಪ್ರಾಣಿ ಇನ್ನೊಂದು ಪ್ರಾಣಿಯನ್ನು ಕೊಲ್ಲದಂತೆ ಆಜ್ಞೆಮಾಡಿದಂತೆಯೂ ಅದರೊಳಗೆ ಒಕ್ಕಣೆಯಿತ್ತು. ಆ ಪತ್ರದ ಸಾರಾಂಶದಿಂದ ನನಗೆ ಪರಮಾನಂದವಾಯಿತು. ನಾನು ಭಯಭೀತಿಯಿಲ್ಲದೆ ನನ್ನ ಮಕ್ಕಳನ್ನೂ ಕರೆದುಕೊಂಡು ಅಂಗಳದಿಂದ ಹೊರಗೆ ತಿರುಗಾಡಲು ಹೋದೆ. ಆದರೆ ಆ ಪಾಪಿ ರಾಯನರಿ ಅಲ್ಲಿಯೇ

ಪೊದೆಗಳಲ್ಲಿ ಹೊಂಚುಹಾಕುತ್ತಿದ್ದು, ನನ್ನ ಒಬ್ಬ ಮಗನನ್ನು ಕೊಂಡು ಹೋಯಿತು. ಅಲ್ಲಿಂದ ಮೊದಲಾಗಿ ಆಗಿಂದ ಆಗ್ಗೆ ಒಂದೊಂದನ್ನು ಆಹುತಿ ತೆಗೆದುಕೊಳ್ಳುತ್ತಿದೆ. ನನಗೆ ಇದ್ದ ಹದಿನೈದು ಮಕ್ಕಳಲ್ಲಿ ನೆನ್ನೆಗೆ ನಾಲ್ಕಾರು ಮಾತ್ರ ಉಳಿದಿದ್ದವು. ನೆನ್ನೆ ಇನ್ನೂ ಒಬ್ಬ ಮಗಳು ರಾಯನರಿಯ ಬಾಯಲ್ಲಿ ಪ್ರಾಣ ಒಪ್ಪಿಸಿದಳು. ನಾಯಿಗಳು ಅವಳ ದೇಹವನ್ನು ಮಾತ್ರ ತಂದುವು. ಮಹಾಸ್ವಾಮಿಯವರು ಗಮನಿಸಬೇಕು" ಎಂದು ಗೋಳಾಡಿತು.

ಆಗ ಮೃಗರಾಜನಾದ ಸಿಂಹವು "ಕೇಳಿದೆಯ, ಹೋತ, ನಿನ್ನ ಸಂಬಂಧಿಯಾದ ರಾಯನರಿಯ ಚರಿತ್ರೆಯನ್ನು?" ಎಂದು ಹಂಗಿಸಿ, "ಹುಂಜ, ನೀನು ವ್ಯಥೆ ಪಡಬೇಡ, ನಿನ್ನ ದೂರನ್ನು ವಿಚಾರಿಸಿ ಪರಿಹಾರ ಕೊಡಿಸುತ್ತೇವೆ. ನಿನ್ನ ಮಗಳನ್ನು ಸಕಲ ವೈಭವಗಳೊಡನೆ ಮಣ್ಣು ಮಾಡಿಸುತ್ತೇವೆ. ನಿನ್ನ ಮಗಳನ್ನು ಕೊಂದವನಿಗೆ ತಕ್ಕ ಶಿಕ್ಷೆ ವಿಧಿಸುತ್ತೇವೆ" ಎಂದು ಸಂತೈಸಿ, ರಾಯನರಿಯನ್ನು ಸಭೆಗೆ ಕರೆಸಬೇಕೆಂದು ನಿಶ್ಚಯಿಸಿತು.

ರಾಯನರಿಯನ್ನು ಕರೆಯುವ ಕಾರ್ಯಕ್ಕಾಗಿ ಯಾರನ್ನು ಕಳುಹಿಸಬೇಕೆಂಬುದನ್ನು ಕುರಿತು ಬಹಳ ಚರ್ಚೆಯಾಯಿತು. ಕೊನೆಗೆ ತಕ್ಕಮಟ್ಟಿಗೆ ದೊಡ್ಡಮೃಗವಾದ ಕೂದಲುಕರಡಿಯನ್ನು ಕಳುಹಿಸಬೇಕೆಂದು ಎಲ್ಲ ಪ್ರಾಣಿಗಳೂ ತೀರ್ಮಾನಿಸಿದುವು.

೨

ಮಾರನೆಯ ಬೆಳಗ್ಗೆ ಕರಡಿ ರಾಯನರಿಯನ್ನು ಹುಡುಕಿಕೊಂಡು ಹೊರಟಿತು. ರಾಯನರಿಯ ಮನೆಗೆ ಅದು ಬಂದಾಗ, ಮನೆಬಾಗಿಲು ಮುಚ್ಚಿತ್ತು. ಎಷ್ಟು ತಟ್ಟಿದರೂ ಯಾರೂ ಬಾಗಿಲು ತೆಗೆಯಲಿಲ್ಲ. ಕಡೆಗೆ ಕರಡಿ "ಬಾಗಿಲು ತೆಗೆ, ರಾಯನರಿ. ಬಂದಿರುವವನು ನಾನೊಬ್ಬನೇ, ನಿನ್ನ ಸೋದರಮಾವ, ಕರಡಿ. ಮಹಾರಾಜನಾದ ಸಿಂಹವು ನಿನ್ನನ್ನು ಸಭೆಗೆ ಬರಬೇಕೆಂದು ಕರೆಯುತ್ತದೆ. ನೀನಾಗಿಯೆ ಬರುವುದಿಲ್ಲವಾದುದರಿಂದ ನಿನ್ನನ್ನು ಕರೆದುಕೊಂಡು ಬರಲು ನನ್ನನ್ನು

ಕಳುಹಿಸಿದೆ. ನೀನು ಈಗಲೂ ಬರದೆ ಹೋದರೆ ನಿನಗೆ ಮರಣದಂಡನೆ ಯಾದೀತು" ಎಂದು ಕೂಗಿ ಹೇಳಿತು.

ರಾಯನರಿ ಬಾಗಿಲಿನ ಆಚೆ ನಿಂತುಕೊಂಡೇ ಎಲ್ಲಾ ಕೇಳಿತು. ಹಾಗೆಯೇ ಒಂದು ಗಳಿಗೆ ನಿಂತು, ಕರಡಿಗೂ ಅವಮಾನಮಾಡಿ ಕಳುಹಿಸುವ ಉಪಾಯವನ್ನು ಯೋಚಿಸಿತು. ಉಪಾಯ ಹೊಳೆದನಂತರ ಬಾಗಿಲು ತೆಗೆದು, "ಬಾ, ಮಾವ. ಬಾ. ಪಾಪ, ಬಾಗಿಲಲ್ಲಿ ಎಷ್ಟು ಹೊತ್ತು ಕಾದಿದ್ದೆಯೊ! ನಿನ್ನ ಧ್ವನಿ ಕೇಳಿಸಿದಾಗ ನಾನು ದೇವರ ಸ್ತೋತ್ರ ಹೇಳುತ್ತಿದ್ದೆ. ಆದ್ದರಿಂದ ಬಾಗಿಲು ತೆಗೆಯುವುದು ತಡವಾಯಿತು. ಬಾ. ಒಳಗೆ ಬಾ. ಇದೇನು? ನನ್ನನ್ನು ಕರೆಯುವುದಕ್ಕೆ ರಾಜನು ನಿನ್ನನ್ನು ಕಳುಹಿಸಬೇಕಾಯಿತೆ? ಆದರೂ ಈ ಹೊತ್ತು ನಾನು ನಿನ್ನೊಡನೆ ಬರುವಂತಿಲ್ಲ. ವೈಗಾಗದ ಏನೇನೋ ಪದಾರ್ಥಗಳನ್ನು ತಿಂದು ನನಗೆ ಅಜೀರ್ಣವಾಗಿಬಿಟ್ಟದೆ" ಎಂದಿತು.

"ಅಂತಹದು ಏನನ್ನು ನೀನು ತಿಂದೆ?" ಎಂದು ಕರಡಿ ಕೊಂಚ ಆಸೆಯಿಂದ ಕೇಳಿತು.

"ಅಂತಹದು ಏನೂ ಇಲ್ಲ, ಮಾವ. ಬಹಳ ಸಾಮಾನ್ಯವಾದ ಪದಾರ್ಥ. ಬೇರೆ ಯಾರೂ ತಿನ್ನದುದನ್ನು ನಾವು ಬಡವರು ತಿನ್ನಬೇಕು ತಾನೆ. ಎಲ್ಲಿಯೋ ಒಂದಿಷ್ಟು ಜೇನು ಸಿಕ್ಕಿತು. ತಿಂದುಬಿಟ್ಟೆ. ಅದೇ ವೈಗಾಗಲಿಲ್ಲ, ನೋಡು" ಎಂದು ನರಿ ಹೊಟ್ಟೆನೋವು ಬಂದಂತೆ ನಟಿಸಿತು.

ಜೇನಿನ ಹೆಸರು ಕೇಳಿ ಕರಡಿಯ ಬಾಯಿಯಲ್ಲಿ ನೀರು ಒಡೆಯಿತು. "ಜೇನನ್ನು ಕುರಿತು ಹಾಗೆಲ್ಲಾ ಹೀನವಾಗಿ ಮಾತನಾಡಬೇಡ. ಜೇನಿಗಿಂತ ದೊಡ್ಡವಸ್ತು ಜಗತ್ತಿನಲ್ಲೆ ಇಲ್ಲ. ನನಗೆ ಜೇನು ಒಂದಿಷ್ಟು ಕೊಡು, ಸಾಯುವವರೆಗೆ ನಾನು ನಿನ್ನ ಗುಲಾಮನಾಗಿರುತ್ತೇನೆ" ಎಂದು ಕರಡಿ ಹೇಳಿತು.

"ಇಷ್ಟು ಜೇನು ಏಕೆ, ಮಾವ? ಅಷ್ಟು ಜೇನು ಅಲ್ಲಿದೆ. ನಿನ್ನಂತಹವರು ಸಾವಿರ ಜನಕ್ಕೆ ಸಂತರ್ಪಣೆ ಮಾಡಿಸುವಷ್ಟು ಇದೆ. ಬೇಕಾದರೆ

ಹೇಳು, ತಂದು ಕೊಡುತ್ತೇನೆ" ಎಂದು ರಾಯನರಿ ಹೊರಡಲು ಎದ್ದಿತು.

ಕರಡಿ ಅದನ್ನು ತಡೆದು, "ನೀನು ಹೇಳಿದಷ್ಟು ಜೇನಿರುವುದು ಅಸಾಧ್ಯ. ಸಾವಿರ ಜನಕ್ಕೆ ಸಂತರ್ಪಣೆ ಮಾಡಿಸುವುದೆಂದರೆ ಎಷ್ಟು ಜೇನು ಬೇಕು, ಏನು ಕತೆ!" ಎಂದು ಜೇನನ್ನು ಮನಸ್ಸಿನಲ್ಲಿಯೇ ಸವಿಯುತ್ತಾ ನಿಂತುಕೊಂಡಿತು.

ರಾಯನರಿ, ಕರಡಿಯು ಗಮನ ಜೇನಿನಲ್ಲಿ ಮುಳುಗಿದುದನ್ನು ಕಂಡು, ಒಳಗೊಳಗೆಯೆ ನಗುತ್ತಾ "ಇಲ್ಲ ಮಾವ. ಇಲ್ಲಿಯೆ ಹತ್ತಿರದಲ್ಲಿ ಒಬ್ಬ ತೋಟಗಾರನಿದ್ದಾನೆ. ಅವನ ಹತ್ತಿರವಿರುವ ಜೇನು ಹತ್ತು ವರ್ಷ ತಿಂದರೂ ಮುಗಿಯುವಂತಿಲ್ಲ. ತೋರಿಸುತ್ತೇನೆ, ಬಾ" ಎಂದು ಕರಡಿಯನ್ನೂ ಹಿಂದೆ ಕರೆದುಕೊಂಡು ಹೋಯಿತು.

ರಾಯನರಿ ಹೇಳಿದ ತೋಟದ ಮಧ್ಯದಲ್ಲಿ ಒಂದು ಅರಳಿಮರದ ಬುಡ ಬಿದ್ದಿತ್ತು. ಅದನ್ನು ಮಧ್ಯದಲ್ಲಿ ಸೀಳಿ ಬೆಣೆ ಸಿಕ್ಕಿಸಿದ್ದರು. ಮರ ಮಧ್ಯದಲ್ಲಿ ಬಾಯಿ ಬಿಟ್ಟುಕೊಂಡಿತ್ತು. ರಾಯನರಿ ಕರಡಿಗೆ ಅದನ್ನು ತೋರಿಸಿ, "ಮಾವ, ತೋಟಗಾರನು ಇದರೊಳಗೆ ತುಂಬ ಜೇನು ತುಂಬಿ ಇಟ್ಟಿದ್ದಾನೆ. ನೀನು ಬೇಕಾದಷ್ಟು ತೆಗೆದುಕೊಳ್ಳಬಹುದು. ಆದರೆ ಮಾತ್ರ ಅಜೀರ್ಣವಾಗುವಷ್ಟು ತಿನ್ನಬೇಡ" ಎಂದಿತು.

ಕರಡಿ ಹಿಂದುಮುಂದು ನೋಡಲಿಲ್ಲ. ಜೇನು ತಿನ್ನುವ ದುರಾಸೆಯಿಂದ ರಾಯನರಿಯ ಮಾತಿಗೆ ಮರುಳಾಗಿ ಆ ಮರದ ಸೀಳಿನಲ್ಲಿ ಮುಖವಿಟ್ಟಿತು. ಅದೇ ಸಮಯವನ್ನು ಕಾಯುತ್ತಿದ್ದ ನರಿ ಅಲ್ಲಿ ಸಿಕ್ಕಿಸಿದ್ದ ಬೆಣೆಯನ್ನು ಕಿತ್ತುಬಿಟ್ಟಿತು. ಕರಡಿಯ ತಲೆ ಆ ಮರದ ಸೀಳಿನಲ್ಲಿ ಬಲವಾಗಿ ಸಿಕ್ಕಿಕೊಂಡುಬಿಟ್ಟಿತು. ಕರಡಿ ಎಷ್ಟೆಷ್ಟೋ ಎಳೆದಾಡಿತು. ಆದರೂ ಅದಕ್ಕೆ ಬಿಡುಗಡೆಯಾಗಲಿಲ್ಲ. ಅದರ ಕೋಪದ ಕೂಗೂ ಒದ್ದಾಟವೂ ಹೆಚ್ಚಾಯಿತು.

ರಾಯನರಿ "ಒದ್ದಾಡಬೇಡ, ಮಾವ. ಜೇನು ಚೆನ್ನಾಗಿದೆಯೆ? ನಿದಾನವಾಗಿ ತಿನ್ನು. ಮನೆಗೂ ಒಂದಿಷ್ಟು ಎತ್ತಿಕೊಂಡು ಹೋಗು.

ಬಕಾಸುರನಂತೆ ನೀನೇ ಎಲ್ಲ ತಿಂದುಬಿಡುವೆಯ ?" ಎಂದು ಅಣಕಿಸುತ್ತಾ ಪಕ್ಕದಲ್ಲಿ ಕುಳಿತಿತ್ತು.

ಕರಡಿಯು ಗದ್ದಲ ಕೇಳಿ ತೋಟಗಾರನು ಬಂದನು. ಆಗ ನರಿ ತಾನು ಅಲ್ಲಿರಬಾರದೆಂದು ಮನೆಯ ಕಡೆಗೆ ಓಡಿಹೋಯಿತು. ತೋಟಗಾರನೂ ತೋಟದ ಇತರ ಕಾವಲಿನವರೂ ಓಡಿ ಬಂದರು. ಪ್ರತಿಯೊಬ್ಬನ ಕೈಯಲ್ಲೂ ಗುದ್ದಲಿ, ಹಾರೆ, ಸಲಿಕೆ, ಮಚ್ಚು, ಕುಡುಗೋಲು ಮುಂತಾದ ಆಯುಧವಿತ್ತು. ಅವರು ಬರುವ ಸದ್ದನ್ನೂ ಅವರು ಕೂಗುವ ಕೂಗನ್ನೂ ಕೇಳಿ ಕರಡಿ ಬಲವಾಗಿ ಒದ್ದಾಡಿ, ಕಡೆಗೆ ತಲೆಯನ್ನು ಬಿಡಿಸಿಕೊಂಡಿತು. ಆದರೆ ಬಿಡಿಸಿಕೊಳ್ಳುವುದರಲ್ಲಿ ತನ್ನ ಎರಡು ಕಿವಿಗಳ ಜೊತೆಗೆ ತಲೆಯ ಚರ್ಮದಲ್ಲಿ ಅರ್ಧದಷ್ಟನ್ನೂ ಕಳೆದುಕೊಂಡಿತು. ತೋಟದವರೆಲ್ಲಾ ಅದಕ್ಕೆ ಆಳಿಗೊಂದು ಏಟು ಹೊಡೆದರು. ಕರಡಿಗೂ ರೋಷ ಮಿತಿಮೀರಿತು. ಅದು ಆ ಗುಂಪಿನ ಮೇಲೆ ತಿರುಗಿಬಿದ್ದಾಗ ಅವರಲ್ಲಿ ಒಬ್ಬನು ಪಕ್ಕದ ನದಿಗೆ ಮುಗುಚಿಕೊಂಡನು. ಅವನನ್ನು ಮೇಲೆತ್ತುವುದರಲ್ಲಿ ಮಿಕ್ಕವರು ಮಗ್ನರಾಗಿದ್ದಾಗ, ಕರಡಿ ತಾನು ಬದುಕಿದುದೆ ಭಾಗ್ಯವೆಂದುಕೊಂಡು ಕಾಡಿಗೆ ಓಡಿಹೋಯಿತು.

ಕರಡಿಯನ್ನು ಆ ಇರುಕಿನಲ್ಲಿ ಸಿಕ್ಕಿಸಿ ಹೋದ ರಾಯನರಿ ಮನೆಗೆ ಹೋಗುವ ಮಾರ್ಗದಲ್ಲಿ ಒಂದು ಕೋಳಿ ಕದ್ದಿತು. ಅದನ್ನು ನದಿಯ ತೀರಕ್ಕೆ ತಂದು ತಿನ್ನುತ್ತಾ ಕುಳಿತಿದ್ದಾಗ ಕರಡಿಯೂ ಕಿವಿಗಳನ್ನು ಕಳೆದುಕೊಂಡು ಅಲ್ಲಿಗೆ ಬಂದಿತು. ನರಿ ಅದನ್ನು ಪುನಃ ಅಣಕಿಸುತ್ತಾ "ಏನು, ಮಾವ? ಜೇನುತುಪ್ಪ ಚೆನ್ನಾಗಿತ್ತೆ? ತೋಟಗಾರ ಅದಕ್ಕೆ ಬೆಲೆ ಕೇಳಿದನೇನು? ಕಾಸುಕೊಡುವುದು ಮರೆತುಬಿಟ್ಟು ಕಿವಿಗಳನ್ನು ಕೊಟ್ಟಹಾಗಿದೆ! ನಿನ್ನ ಮೂಗನ್ನು ಮಾರಾಟಮಾಡುವುದಕ್ಕೂ ನೀನು ಇಷ್ಟಪಟ್ಟರೆ ಇನ್ನೊಂದು ಕಡೆ ಕರೆದುಕೊಂಡು ಹೋಗುತ್ತೇನೆ" ಎಂದಿತು.

ಕರಡಿಗೆ ಕೋಪದಿಂದ ಮಾತೇ ಹೊರಡಲಿಲ್ಲ. ರಾಜನಿಗೆ ಹೇಳಿ ನರಿಯನ್ನು ನಿರ್ಮೂಲಮಾಡಿಸುತ್ತೇನೆಂದು ಮನಸ್ಸಿನಲ್ಲಿಯೆ ಎಂದುಕೊಂಡು, ಮಾತನಾಡದೆ ಕಾಡಿಗೆ ಹೋಯಿತು. ಕಾಡಿನಲ್ಲಿ ಯಾವ ಪ್ರಾಣಿಗೂ ಅದರ ಗುರುತೇ ಸಿಕ್ಕಲಿಲ್ಲ. ಇದು ಯಾವುದೋ ಹೊಸ

ಪ್ರಾಣಿಯೆಂದು ಎಲ್ಲಾ ಆಶ್ಚರ್ಯಪಟ್ಟವು. ಕಡೆಗೆ, ಅದು ತನ್ನ ಕಾಡಿನ ಕೂದಲುಕರಡಿಯೆಂದು ಸಿಂಹ ಗುರುತು ಹಿಡಿಯಿತು.

"ನಾನು ಕಳುಹಿಸಿದ ಕರಡಿಯನ್ನು ಹೀಗೆ ಅವಮಾನಪಡಿಸಿದವನು ಯಾರು?" ಎಂದು ಸಿಂಹ ಗರ್ಜಿಸಿತು.

"ಬೇರೆ ಯಾರು, ಮಹಾಸ್ವಾಮಿ? ಆ ಪಾಪಿ, ರಾಯನರಿ!" ಎಂದು ಕರಡಿಯೆಂದಿತು.

೩

ರಾಯನರಿಯನ್ನು ಹೇಗೆ ಶಿಕ್ಷಿಸಬೇಕೆಂದು ಸಿಂಹದ ಸಭೆಯಲ್ಲಿ ಪುನಃ ತುಂಬಾ ಚರ್ಚೆಯಾಯಿತು. ಶಿಕ್ಷಿಸುವುದಕ್ಕೆ ಮೊದಲು ರಾಯನರಿ ತಮಗೆ ಕೈವಶವಾಗಬೇಕಾದುದರಿಂದ, ರಾಯನರಿಯನ್ನು ಹೇಗಾದರೂ ಯಾರಾದರೂ ಕರೆದುತರಬೇಕೆಂದು ತೀರ್ಮಾನವಾಯಿತು. ಈ ಎರಡನೆಯ ಸಲ ದೂತನಾಗಿ ಹೋಗುವ ಭಾರ ಕರಿಬೆಕ್ಕಿನ ಮೇಲೆ ಬಿತ್ತು.

ರಾಯನರಿಯನ್ನು ಕರೆತರಲು ಬೆಕ್ಕು ಹೋಗಬೇಕೆಂದು ಎಲ್ಲಾ ಪ್ರಾಣಿಗಳೂ ಒಪ್ಪಿದರೂ, ಬೆಕ್ಕು ಎದ್ದು ನಿಂತು, "ಮಹಾಪ್ರಭು! ನನಗಿಂತ ದೊಡ್ಡವರು ಯಾರನ್ನಾದರೂ ಕಳುಹಿಸುವುದು ಮೇಲೆಂದು ನನಗೆ ತೋರುತ್ತದೆ. ನಾನೋ ಸಣ್ಣ ಪ್ರಾಣಿ, ಶಕ್ತಿ ಕಡಿಮೆ. ಕೂದಲು ಕರಡಿಯಂತಹ ಆಜಾನುಬಾಹುವಿಗೇ ಇಂತಹ ಅವಸ್ಥೆಯಾಗಿರುವಾಗ ನಾನು ಹೋಗಿ ಸಾಧಿಸಿಕೊಂಡು ಬರಲು ಹೇಗೆ ಸಾಧ್ಯ?" ಎಂದಿತು.

ಅದಕ್ಕೆ ಸಿಂಹವು "ಮಹಾಮಾರ್ಜಾಲ, ನಿನ್ನ ದೇಹಬಲಕ್ಕೋಸ್ಕರ ನಿನ್ನನ್ನು ನಾವು ಕಳುಹಿಸುತ್ತಿಲ್ಲ. ನಿನ್ನ ಬುದ್ಧಿಬಲಕ್ಕಾಗಿ ನಿನ್ನನ್ನು ಕಳುಹಿಸುತ್ತಿದ್ದೇವೆ" ಎಂದಿತು.

ಕರಿಬೆಕ್ಕು ರಾಜನ ಮಾತಿಗೆ ಎದುರು ಹೇಳಲಾರದೆ "ಮಹಾರಾಜರ ಅಪ್ಪಣೆ ಹೇಗೋ ಹಾಗೆ ನಾನು ಸೇವಕ ನಡೆಯುತ್ತೇನೆ. ಪ್ರಭುಗಳ ಪ್ರಭಾವದಿಂದ ನಾನು ಹೋದ ಕೆಲಸ ಕೈಗೂಡಬೇಕು" ಎಂದು ಹೇಳಿ, ಕಾಡನ್ನು ಬಿಟ್ಟು ರಾಯನರಿಯ ಮನೆಗೆ ಹೊರಟಿತು.

ಕರಿಬೆಕ್ಕು ಬಂದಾಗ ರಾಯನರಿ ತನ್ನ ಮನೆಬಾಗಿಲಲ್ಲೆ ನಿಂತಿತ್ತು.

"ನಮುಸ್ಕಾರ, ರಾಯಣ್ಣ. ದೊರೆ ನಿನ್ನನ್ನು ಬರಹೇಳಿದ್ದಾನೆ. ಈ ಸಲವಾದರೂ ನೀನು ಬರದೆಹೋದರೆ ನಿನ್ನನ್ನು ಕಲ್ಲುಗಾಣದಲ್ಲಿ ಅರೆಸಿಬಿಡುತ್ತಾನೆ" ಎಂದು ಕರಿಬೆಕ್ಕು ತಿಳಿಸಿತು.

ಅದಕ್ಕೆ ರಾಯನರಿ, "ತಮ್ಮಯ್ಯ, ಅರಸನು ಆಜ್ಞೆಮಾಡಿದ ಮೇಲೆ, ನೀನು ಬಂದು ಕರೆದ ಮೇಲೆ, ನಾನು ಬರದೆ ಹೋದೇನೆ? ಆದರೂ, ಈಗತಾನೆ ಬಂದಿರುವೆ; ಸ್ವಲ್ಪ ವಿಶ್ರಮಿಸಿಕೊ. ನನ್ನ ಈ ಬಡಮನೆಯ ಆತಿಥ್ಯವನ್ನು ಸ್ವೀಕರಿಸು. ಈ ರಾತ್ರಿ ಇಲ್ಲಿ ನಿಲ್ಲು. ನಾಳೆ ಬೆಳಗ್ಗೆ ಇಬ್ಬರೂ ಅರಸನ ಬಳಿಗೆ ಹೋಗೋಣ. ನಿನ್ನ ಜೊತೆಯಲ್ಲಿ ಬರಲು ನನಗೆ ಏನೂ ಹೆದರಿಕೆಯಿಲ್ಲ. ಆದರೆ ನೆನ್ನೆ ಆ ಕೂದಲುಕರಡಿ ಬಂದಿತ್ತಲ್ಲ—ಅದರ ಗದರುಮುಖಕ್ಕೆ ಹೆದರಿಕೊಂಡೇ ನಾನು ನೆನ್ನೆ ಬರಲಿಲ್ಲ. ಆದರೆ ನಿನ್ನೊಡನೆ ಬರುವುದಕ್ಕೆ ನನಗೇನು ಹೆದರಿಕೆ, ತಮ್ಮಯ್ಯ?" ಎಂದು ನಯವಾಗಿ ಮಾತನಾಡಿತು.

ಬೆಕ್ಕು ನರಿಯ ಮಾತಿಗೆ ಬೇಗ ಮರುಳಾಗಲಿಲ್ಲ. "ನೀನು ಬಹಳ ವಿಶ್ವಾಸದಿಂದ ನಿಲ್ಲಹೇಳಿದರೂ ಈಗಲೇ ಹೊರಡುವುದೇ ಮೇಲೆಂದು ನನಗೆ ಎನ್ನಿಸುತ್ತದೆ. ಬೆಳದಿಂಗಳು ಬೇಕಾದ ಹಾಗಿದೆ, ಬಾ" ಎಂದಿತು.

ಅದಕ್ಕೆ ನರಿ "ರಾತ್ರಿಯಲ್ಲಿ ನಾಯಿಗಳ ಕಾಟ ಹೆಚ್ಚು. ಆದ್ದರಿಂದ ಹಗಲುಬೆಳಕಿನಲ್ಲಿಯೇ ಹೊರಡೋಣ" ಎಂದು ಬೆಕ್ಕಿನ ಮನಸ್ಸನ್ನು ಬದಲಾಯಿಸಿತು.

ಬೆಕ್ಕು ಆ ರಾತ್ರಿ ಅಲ್ಲಿಯೆ ನಿಲ್ಲಲು ಒಪ್ಪಿತು. ನರಿ ಅದು ನಿಂತುದಕ್ಕೆ ಸಂತೋಷಪಡುತ್ತ, "ರಾತ್ರಿಯ ಊಟಕ್ಕೆ ನಿನಗೆ ಜೇನುತುಪ್ಪ ಆಗಬಹುದು ತಾನೆ?" ಎಂದು ಕೇಳಿತು.

"ಜೇನು ಗೀನು ನನಗೆ ರುಚಿಸುವುದಿಲ್ಲ. ನನಗೆ ಇನ್ನೇನು ಇಲ್ಲದಿದ್ದರೂ, ಬೇಡ; ಒಂದು ಸಣ್ಣ ಇಲಿಯಮರಿ ಆದರೆ ಸಾಕು" ಎಂದು ಬೆಕ್ಕು ಹೇಳಿತು.

ಅದಕ್ಕೆ ರಾಯನರಿ, "ಒಂದು ಇಲಿಯಮರಿಯೆ? ಇಲಿಗಳು, ಇಲಿ ಮರಿಗಳು, ಹೆಗ್ಗಣಗಳು—ಇವುಗಳ ಪ್ರಪಂಚವೇ ಇಲ್ಲಿದೆ. ಇಲ್ಲಿಂದ ಅರ್ಧ ಹರಿದಾರಿದೂರದಲ್ಲಿ ಒಂದು ಮನೆಯಿದೆ. ಅಲ್ಲಿರುವ ಇಲಿಗಳನ್ನು ತಿಂದು ಮುಗಿಸುವ ತಮ್ಮಯ್ಯ ಈ ಲೋಕದಲ್ಲೇ ಇಲ್ಲ" ಎಂದಿತು.

ಬೆಕ್ಕಿನ ಬಾಯಿಯಲ್ಲಿ ನೀರು ಧಾರಾಕಾರವಾಗಿ ಸುರಿಯತೊಡಗಿತು. "ರಾಯಣ್ಣ, ಆ ಇಲಿಗಳ ಬಿಲ ತೋರಿಸು; ನಾನು ಸಾಯುವವರೆಗೂ ನಿನ್ನ ಗುಲಾಮನಾಗಿರುತ್ತೇನೆ. ನೀನು ನನ್ನ ತಾಯಿತಂದೆ ಬಂಧುಬಳಗವೆಲ್ಲವನ್ನೂ ಕೊಂದಿದ್ದರೂ ಸರಿಯೆ, ಆ ಇಲಿಗಳ ಬಿಲ ತೋರಿಸು; ನೀನು ಮಾಡಿದ್ದನ್ನೆಲ್ಲಾ ನಾನು ಮರೆತುಬಿಡುತ್ತೇನೆ" ಎಂದು ಬೇಡಿಕೊಂಡಿತು.

ನರಿ ಅದನ್ನು ತಾನು ಹೇಳಿದ ಮನೆಗೆ ಕರೆದುಕೊಂಡುಹೋಯಿತು. ಆ ಮನೆಯ ಸುತ್ತ ಒಂದು ಸಣ್ಣ ಮಣ್ಣುಗೋಡೆ ಇತ್ತು. ಆ ಗೋಡೆಯಲ್ಲಿ ಒಂದು ಬಿಲವಿತ್ತು. ಹಿಂದಿನ ರಾತ್ರಿ ತಾನೆ ನರಿ ಆ ಮನೆಗೆ ಆ ಬಿಲದಿಂದ ನುಗ್ಗಿ ಒಂದು ಕೋಳಿ ಕದ್ದುಕೊಂಡುಹೋಗಿತ್ತು. ಕೋಳಿ ಕಳೆದುಕೊಂಡುದರಿಂದ ಮನೆಯವನು ಸಿಟ್ಟಾಗಿ, ಕಳ್ಳನನ್ನು ಹಿಡಿಯಬೇಕೆಂದು ಬಿಲದ ಬಳಿ ಒಂದು ಬೋನು ಇಟ್ಟಿದ್ದನು. ಅದು ನರಿಗೂ ತಿಳಿದಿತ್ತು. ಆ ಬೋನಿನಲ್ಲಿ ಬೆಕ್ಕನ್ನು ಬೀಳಿಸಬೇಕೆಂದೇ ನರಿ ಅದನ್ನು ಕರೆದುಕೊಂಡುಬಂದಿತ್ತು.

ಬಿಲದ ಹತ್ತಿರ ಬಂದಾಗ, ನರಿ, "ತಮ್ಮಯ್ಯ, ಇದೊ ಈ ಬಿಲದೊಳಗೆ ಹೋಗು. ಬೇಕಾದಷ್ಟು ಇಲಿಗಳನ್ನು ಭಕ್ಷಿಸು. ಆದರೆ ಬಹಳ ಮಿತಿಮೀರಿ ತಿನ್ನಬೇಡ. ಬಿಲದಿಂದ ಹೊರಗೆ ಬರಲಾರದಷ್ಟು ಪ್ಪೈದಪ್ಪನಾದೀತು. ಬೇಗ ಬಂದುಬಿಡು" ಎಂದು ಬೆಕ್ಕನ್ನು ಒಳಕ್ಕೆ ತಳ್ಳಿತು.

ಬೆಕ್ಕೂ ಒಳಕ್ಕೆ ಹಾರಿತು. ಹಾರಿದೊಡನೆ ಬೋನಿನಲ್ಲಿ ಸಿಕ್ಕಿಬಿತ್ತು. ಬಿಡಿಸಿಕೊಳ್ಳಲು ಒದ್ದಾಡಿತು, ಕೂಗಾಡಿತು. ಮನೆಯವರಿಗೆಲ್ಲ ಎಚ್ಚರವಾಯಿತು. ಅವರು ತಮ್ಮ ಕೋಳಿಯ ಕಳ್ಳ ಸಿಕ್ಕಿತೆಂದು ಕೂಗುತ್ತಾ ಎದ್ದುಬಂದರು.

ನರಿ ಮಾತ್ರ ಹೊರಗಡೆಯೆ ನಿಂತು, "ತಮ್ಮಯ್ಯ, ಇಲಿ ಚೆನ್ನಾಗಿದೆಯೆ? ನಿನಗೆ ತೃಪ್ತಿಯಾಯಿತೆ? ಊಟಮಾಡುವಾಗ ಸಂಗೀತವನ್ನೂ ಹೇಳುವುದು ನಿಮ್ಮವರ ಸಂಪ್ರದಾಯವೊ? ಆಗಲಿ, ಆಗಲಿ" ಎಂದು ಅಣಕಿಸುತ್ತಾ, ಮನೆಯವರು ಎದ್ದು ಬಂದ ಸದ್ದು ಕೇಳಿ ತನ್ನ ಮನೆಗೆ ಓಡಿಹೋಯಿತು. ಬೆಕ್ಕಿನ ಕತೆ ಮುಗಿಯಿತೆಂದು ಅದು ಧೈರ್ಯದಿಂದಿತ್ತು.

ಮನೆಯವರು ಬಂದಾಗ ಬೆಕ್ಕು ಬೆದರಿ ಒದ್ದಾಡಿತು. ಹತ್ತಿರ ಬಂದ ಮನೆಯ ಯಜಮಾನನನ್ನು ಚೆನ್ನಾಗಿ ಪರಚಿಬಿಟ್ಟಿತು. ಅವನು ಮೂರ್ಛಿತನಾದನು. ಅವನ ಉಪಚಾರದಲ್ಲಿ ಮಿಕ್ಕವರು ಮಗ್ನರಾಗಿರುವಾಗ ಬೆಕ್ಕು ಹೇಗೆ ಹೇಗೋ ಮಾಡಿ ಬೋನಿನಿಂದ ತಪ್ಪಿಸಿಕೊಂಡಿತು. ಅದರ ಮೈಯೆಲ್ಲ ರಕ್ತಮಯವಾಗಿತ್ತು. ಅದರ ಒಂದು ಕಾಲು ಕೊಂಚ ಮುರಿದುಹೋಗಿತ್ತು. ಹಾಗೆಯೇ ಕುಂಟಿಕೊಂಡೇ ಕರಿಬೆಕ್ಕು ಕಾಡನ್ನು ಸೇರಿತು.

ಕರಿಬೆಕ್ಕಿಗೆ ಆದ ಗತಿಯನ್ನು ಕಂಡು ಸಿಂಹದ ಸೈರಣೆ ಮಿತಿ ಮೀರಿತು. ತಾನೇ ಹೋಗಿ ರಾಯನರಿಯನ್ನು ಬೇಟೆಯಾಡಿ ಹಿಡಿದು ತರಬೇಕೆನ್ನುವಷ್ಟು ಸಿಟ್ಟು ಬಂದಿತು. ಆಗ ರಾಯನರಿಯ ಸಂಬಂಧಿಯಾದ ಮುದಿಹೋತ ಎದ್ದು, "ಮಹಾಸ್ವಾಮಿ, ಈ ಕೂದಲು ಕರಡಿ, ಕರಿಬೆಕ್ಕುಗಳ ಮಾತಿನ ಆಧಾರದ ಮೇಲೆ ರಾಯನರಿಯನ್ನು ಕುರಿತು ತೀರ್ಮಾನಕ್ಕೆ ಬರುವುದು ಬೇಡ. ಎರಡುಸಲ, ಬರಬೇಕೆಂದು ಅದನ್ನು ಕರೆದುದಾಯಿತು. ಇನ್ನೊಂದುಸಲ ಕರೆಯುವುದರಲ್ಲಿ ಏನು ನಷ್ಟ? ಮಹಾಸ್ವಾಮಿಯವರು ಅಪ್ಪಣೆ ಕೊಡುವುದಾದರೆ ಈ ಸಲ ರಾಯನರಿಯನ್ನು ಕರೆಯಲು ನಾನು ಹೋಗುತ್ತೇನೆ" ಎಂದು ಪ್ರಾರ್ಥಿಸಿತು.

ಸಿಂಹವು ಹಾಗೆಯೇ ಆಗಲೆಂದು ಅದನ್ನು ಕಳುಹಿಸಿಕೊಟ್ಟಿತು.

೪

ಮುದಿಹೋತ ರಾಯನರಿಯ ಮನೆಗೆ ಬಂದಾಗ, ರಾಯನರಿ ತನ್ನ ಹೆಂಡತಿ ಮಕ್ಕಳೊಡನೆ ಆಟವಾಡುತ್ತಿತ್ತು. ಮುದಿಹೋತನನ್ನು ಕಂಡರೆ

ರಾಯನರಿಗೆ ಕೊಂಚ ವಿಶ್ವಾಸವಿತ್ತು. ಆದ್ದರಿಂದ ಅದನ್ನು ತನ್ನ ಮನೆಯೊಳಕ್ಕೆ ಕರೆದುಕೊಂಡುಹೋಗಿ ಕೂಡಿಸಿಕೊಂಡಿತು.

ಆಗ ಮುದಿಹೋತ ನರಿಯ ಹೆಂಡತಿ ಮಕ್ಕಳನ್ನು ವಿಶ್ವಾಸದಿಂದ ಮಾತನಾಡಿಸಿ, ನರಿಯನ್ನು ಕುರಿತು "ಎರಡುಸಲ ಹೇಳಿಕಳುಹಿಸಿದರೂ ನೀನು ಬರಲಿಲ್ಲವೆಂದು ಸಿಂಹಕ್ಕೆ ಸಿಟ್ಟಾಗಿದೆ. ಪ್ರತಿ ಪ್ರಾಣಿಯೂ ನಿನ್ನ ಮೇಲೆ ಒಂದೊಂದು ದೂರು ಹೇಳುತ್ತಿದೆ. ನಿನ್ನನ್ನು ಕರೆಯುವುದಕ್ಕೆ ಬಂದಿರುವುದು, ಇದು ಮೂರನೆಯ ಸಲ. ನಿನಗೆ ನಾನು ಏನೂ ಬುದ್ಧಿ ಹೇಳಬೇಕಾಗಿಲ್ಲ. ಇನ್ನು ಒಂದು ದಿನ ನೀನು ತಡಮಾಡಿದರೂ ನಿನ್ನ ಜೀವಕ್ಕೆ ಅಪಾಯ. ಆದ್ದರಿಂದ ಈಸಲ ನನ್ನೊಡನೆ ಬಂದುಬಿಡು. ಬಂದು ನಿನ್ನ ಬುದ್ಧಿವಂತಿಕೆಯಿಂದ ನಿನ್ನ ಶತ್ರುಗಳ ಬಾಯಿಮುಚ್ಚಿ ನಿನ್ನ ಜೀವವುಳಿಸಿಕೊ" ಎಂದಿತು.

ಅದಕ್ಕೆ ರಾಯನರಿ "ತಾತಯ್ಯ, ನೀನು ಹೇಳುವುದು ಸರಿ. ನಾನು ನಿನ್ನೊಡನೆ ಬರುತ್ತೇನೆ. ನನ್ನ ಮೇಲಿನ ದೂರುಗಳಿಗೆ ನಾನು ಏನೂ ಉತ್ತರ ಕೊಡಬೇಕಾಗಿಲ್ಲ. ಆದರೆ ರಾಜನ ಹಿತಕ್ಕೋಸ್ಕರ ಅವನ ಸುತ್ತಮುತ್ತಿನ ಚಾಡಿಕೋರರನ್ನು ಓಡಿಸುವುದಕ್ಕಾಗಿ ಬರುತ್ತೇನೆ. ನನಗೆ ಎಷ್ಟೋ ಜನ ಶತ್ರುಗಳು ಇದ್ದಾರೆ. ಆದರೆ ನನ್ನನ್ನು ಅವರು ಏನು ಮಾಡಿಯಾರು?" ಎಂದು ತನ್ನ ಹೆಂಡತಿಯ ಕಡೆ ತಿರುಗಿ, ಮಕ್ಕಳನ್ನು ಜೋಪಾನವಾಗಿ ನೋಡಿಕೊ. ಕೊನೆಯ ಮರಿಯ ನಾಯಿಕೆಮ್ಮಲಿಗೆ ಏನಾದರೂ ಔಷಧಮಾಡು. ಜೋಪಾನ" ಎಂದು ಹೇಳಿ ಹೊರಟಿತು.

ರಾಯನರಿ ಮುದಿಹೋತನೊಡನೆ ಅರ್ಧದಾರಿ ನಡೆದು ಆದಾಗ, ಅಲ್ಲೆ ನಿಂತು, "ಅಜ್ಜ, ಅಜ್ಜ, ನನಗೆ ಹೆದರಿಕೆಯಾಗುತ್ತಿದೆ. ನಿಜವಾಗಿ ನಾನು ಎಷ್ಟೋ ಪ್ರಾಣಿಗಳಿಗೆ ಅನ್ಯಾಯಮಾಡಿದ್ದೇನೆ. ಮೊನ್ನೆತಾನೆ ಕೂದಲುಕರಡಿ ಕಿವಿಗಳನ್ನು ಕಳೆದುಕೊಳ್ಳುವಂತೆ ಮಾಡಿದೆ. ನೆನ್ನೆ ಕರಿಬೆಕ್ಕನ್ನು ಬೋನಿನಲ್ಲಿ ಸಿಕ್ಕಿಸಿದೆ. ಕೆಂಪುಹುಂಜಕ್ಕೂ ಅದರ ಮಕ್ಕಳಿಗೂ ಅಪಾರವಾದ ಹಾನಿ ಮಾಡಿದೆ. ಇದನ್ನೆಲ್ಲಾ ಜ್ಞಾಪಿಸಿ ಕೊಂಡರೆ, ದೊರೆಯ ಮುಂದೆ ಬರುವ ಧೈರ್ಯ ನನಗೆ ಇಲ್ಲ" ಎಂದಿತು.

ಪುನಃ, "ಆದರೆ ಎಲ್ಲಾ ಪ್ರಾಣಿಗಳಿಗಿಂತಲೂ ನಾನು ತೋಳಕ್ಕೆ ಹೆಚ್ಚು ತೊಂದರೆ ಕೊಟ್ಟಿದ್ದೇನೆ. ಒಂದುಸಲ ಗಂಟೆ ಬಾರಿಸುವುದನ್ನು ಹೇಳಿಕೊಡುತ್ತೇನೆಂದು ಅದರ ಕತ್ತಿಗೆ ದೊಡ್ಡ ಗಂಟೆ ಕಟ್ಟಿದೆ. ಅದರ ಸದ್ದು ಕೇಳಿ ಊರವರೆಲ್ಲ ಬಂದು ಅದನ್ನು ಸಾಯಬಡಿದರು. ಇನ್ನೊಂದು ಸಲ ಅದನ್ನು ಕೋಳಿ ಕದಿಯುವುದಕ್ಕೆ ಕರೆದುಕೊಂಡುಹೋಗಿದ್ದೆ. 'ನಾನು ಕೋಳಿಯನ್ನು ತರುತ್ತೇನೆ. ಅದುವರೆಗೆ ನೀನು ಇಲ್ಲಿ ಮಲಗಿ ವಿಶ್ರಮಿಸಿಕೊ' ಎಂದು ಹೇಳಿ, ನಾನು ತಿಂದ ಕೋಳಿಯ ಮೂಳೆಗಳನ್ನು ಅದರ ಮುಂದೆ ರಾಶಿಮಾಡಿ, ಮನೆಯವರು ಎಚ್ಚರಗೊಳ್ಳುವಂತೆ ಗಲಾಟೆ ಮಾಡಿದೆ. ಮನೆಯವರು ಎದ್ದುಬಂದು ತೋಳಕ್ಕೆ ಚರ್ಮ ಸುಲಿದು ಬಿಟ್ಟರು. ಇನ್ನೂ ಮೂರುನಾಲ್ಕು ಸಲ ಹೀಗೆಯೇ ಅದನ್ನು ಕಷ್ಟಕ್ಕೆ ಕೆಡವಿದ್ದೇನೆ" ಎಂದು ಹೇಳಿಕೊಂಡು ನಿಟ್ಟುಸಿರುಬಿಟ್ಟಿತು.

ಕಡೆಗೆ "ತಾತಯ್ಯ, ನಾನು ಮಾಡಿದ ಪಾಪಕಾರ್ಯಗಳನ್ನೆಲ್ಲಾ ನಿನಗೆ ತಿಳಿಸಿದ್ದೇನೆ. ಇದಕ್ಕೆ ತಕ್ಕ ಪ್ರಾಯಶ್ಚಿತ್ತ ಏನು, ಹೇಳು?" ಎಂದು ಕೇಳಿತು.

ನರಿಯನ್ನು ಬೈಯುವುದರಿಂದ ಏನೂ ಕಾರ್ಯಸಾಧನೆಯಾಗುವುದಿಲ್ಲವೆಂದು ಹೋತನಿಗೆ ಗೊತ್ತಿತ್ತು. ಉಪಾಯದಿಂದಲೇ ಅದನ್ನು ಒಲಿಸಬೇಕೆಂದುಕೊಂಡು, "ಅಪ್ಪ, ಇದೊ ಈ ಹುಲ್ಲಿನ ಸಳು ತೆಗೆದುಕೊ. ಇದರಿಂದ ಮೂರುಸಲ ನಿನ್ನ ಮೈಮುಟ್ಟಿಕೊ. ಅನಂತರ ಇದನ್ನು ನೆಲದ ಮೇಲಿಟ್ಟು ಮೂರುಸಲ ದಾಟು. ಕಡೆಗೆ ಅದಕ್ಕೆ ಬಂದು ನಮಸ್ಕಾರ ಹಾಕು" ಎಂದಿತು.

ಸಂತೋಷದಿಂದ ನರಿ ಹೋತ ಹೇಳಿದ ಪ್ರಾಯಶ್ಚಿತ್ತವನ್ನು ಮಾಡಿತು. ಆಗ ಹೋತ, "ಇನ್ನಾದರೂ ಮುಂದೆ ಹೊಸ ಪಾಪ ಕಾರ್ಯಗಳನ್ನು ಮಾಡದ ಹಾಗೆ ಎಚ್ಚರದಿಂದಿರು" ಎಂದು ಬುದ್ಧಿ ಹೇಳಿತು. ನರಿ ಹಾಗೆಯೇ ನಡೆದುಕೊಳ್ಳುವೆನೆಂದು ಪ್ರಮಾಣಮಾಡಿತು. ಆದರೆ ಹೋಗುವ ದಾರಿಯಲ್ಲಿ, ಒಂದು ಕೊಬ್ಬಿದ ಕೋಳಿಮರಿಯ ಮೇಲೆ ರಾಯನರಿಯ ಕಣ್ಣು ಬಿತ್ತು. ರಾಯನರಿಯೇನೋ ಮಿಂಚಿನಂತೆ ಹಾರಿತಾದರೂ ಕೋಳಿ ತಪ್ಪಿಸಿಕೊಂಡಿತು. ಹೋತದ ಮುಖ

ನೋಡಲಾರದೆ ರಾಯನರಿ ನಾಚಿಕೆಯಿಂದ ತಲೆತಗ್ಗಿಸಿಕೊಂಡಂತೆ ಮುಂದೆ ಹೋಯಿತು. ದಾರಿಯಲ್ಲಿ ಒಬ್ಬರೂ ಮಾತನಾಡಲಿಲ್ಲ.

೫

ಸಿಂಹ ಸಭೆ ನಡಸುತ್ತಿದ್ದ ಸ್ಥಳಕ್ಕೆ ಹತ್ತಿರ ಬಂದಂತೆಲ್ಲಾ ರಾಯನರಿಯ ಹೆದರಿಕೆ ಹೆಚ್ಚಾಯಿತು. ನಿಜವಾಗಿಯೂ ಅದರ ನಾಲ್ಕೂ ಕಾಲು ನಡುಗುತ್ತಿತ್ತು. ತಾನು ಮಾಡಬಾರದ ಪಾಪಗಳನ್ನೆಲ್ಲ ಮಾಡಿರುವೆನೆಂದು ಅದರ ಎದೆ ಹೊಡೆದುಕೊಳ್ಳುತ್ತಿತ್ತು.

ಮುದಿಹೋತ ರಾಯನರಿಯನ್ನು ಕರೆದುಕೊಂಡು ಬಂದಿತೆಂಬ ಸುದ್ದಿ ಕಾಡುಕಿಚ್ಚಿನಂತೆ ಮೃಗಗಳಲ್ಲಿ ಹಬ್ಬಿಕೊಂಡಿತು. ಸಣ್ಣ ಪ್ರಾಣಿಗಳಿಂದ ದೊಡ್ಡ ಪ್ರಾಣಿಗಳ ವರೆಗೆ ಎಲ್ಲವೂ ರಾಯನರಿಯ ಮೇಲೆ ದೊರೆಗೆ ದೂರು ಹೇಳಲು ಸಿದ್ಧವಾಗಿ ಬಂದುವು.

ರಾಯನರಿ ಅವುಗಳ ನಡುವೆ ತಲೆಯೆತ್ತಿಕೊಂಡೇ ಬಂದಿತು. ಇಷ್ಟು ಧೈರ್ಯವಾಗಿ ಬರುತ್ತಿರುವುದರ ಮೇಲೆ ಹೇಗೆ ತಾನೆ ದೂರು ಹೇಳುವುದೆಂದು ಮಿಕ್ಕ ಪ್ರಾಣಿಗಳೇ ಸಂಕೋಚಪಡುವಂತೆ ಠೀವಿಯಿಂದ ಬಂದಿತು. ಬಂದು ಮೃಗರಾಜನ ಪೀಠದ ಮುಂದೆ ನಿಂತು ನಮಸ್ಕಾರ ಮಾಡಿ, "ಮಹಾಪ್ರಭು, ನಾನು ತಮ್ಮ ಪಾದಸೇವಕನೆಂದು ಬಿನ್ನವಿಸುತ್ತೇನೆ. ತಮ್ಮ ಸೇವೆಯೇ ಸದಾ ನನ್ನ ಸ್ಮರಣೆಯಲ್ಲಿದ್ದರೂ ನನ್ನ ಮೇಲೆ ಇಲ್ಲಸಲ್ಲದುದನ್ನು ಹೇಳಿ ನನ್ನ ನಾಶಕ್ಕೆ ಹಾತೊರೆಯುತ್ತಿರುವ ಅನೇಕ ಪ್ರಾಣಿಗಳು ಇಲ್ಲಿವೆ. ಆದರೆ ಮಹಾಸ್ವಾಮಿಯವರು ಅವರ ಚಾಡಿ ಮಾತುಗಳಿಗೆ ಕಿವಿಗೊಡುವುದಿಲ್ಲವೆಂದು ನಾನು ಧೈರ್ಯವಾಗಿದ್ದೇನೆ" ಎಂದು ಮೊದಲುಮಾಡಿತು.

ಆದರೆ ಸಿಂಹ ಅದರ ಮಾತು ಮುಂದುವರಿಯಲು ಅವಕಾಶ ಕೊಡಲಿಲ್ಲ. "ಮುಚ್ಚುಬಾಯಿ, ಮೋಸಗಾರ. ಮಿಕ್ಕ ಪ್ರಾಣಿಗಳಿಗೆ ಮೋಸ ಮಾಡಿದಂತೆ ನನಗೂ ಮೋಸಮಾಡಬಹುದೆಂದು ತಿಳಿದಿರುವೆಯೇನು? ನಿನ್ನ ಮೋಸಕ್ಕೆ ನಾವು ಒಳಗಾಗುವವರಲ್ಲವೆಂದು ನಿನಗೆ ತಿಳಿದಿರಲಿ. ನಾನು ಕಾಡಿನ ಪ್ರಾಣಿಗಳಿಗೆ ನೀಡಿರುವ ಅಭಯವನ್ನು ನೀನು

ಹೆಜ್ಜೆಹೆಜ್ಜೆಗೂ ಮುರಿದಿರುವೆ. ಕಪಟಿ, ನನ್ನ ಆಜ್ಞೆಗೆ ವಿರುದ್ಧವಾಗಿ ನನ್ನ ಪ್ರಜೆಗಳನ್ನು ಪೀಡಿಸುವ ನೀನು ನನ್ನ ಸೇವೆ ಮಾಡುವವನೆಂದರೆ ಹೇಗೆ ಒಪ್ಪೀತು?" ಎಂದು ರೇಗಿತು.

ನರಿ ತನ್ನ ತಪ್ಪನ್ನು ಕಳೆದುಕೊಳ್ಳುವುದಕ್ಕಾಗಿ "ಸಾರ್ವಭೌಮ, ನಿನ್ನ ಪ್ರಜೆಗಳನ್ನು ನಾನು ಬುದ್ಧಿಪೂರ್ವಕವಾಗಿ ಪೀಡಿಸಿಯೇನೆ? ನೀನು ದೂತಕಾರ್ಯಕ್ಕಾಗಿ ಕಳುಹಿಸಿದ ಕರಡಿ ತನ್ನ ಕರ್ತವ್ಯವನ್ನು ಮರೆತು ತೋಟಗಾರನ ಜೇನನ್ನು ಕದಿಯುವುದಕ್ಕೆ ಹೋಗಿ ಕಿವಿಗಳನ್ನು ಕಳೆದುಕೊಂಡದ್ದು ನನ್ನ ತಪ್ಪೆ? ಅದರಂತೆಯೇ ಬಂದ ಬೆಕ್ಕು ಕೂಡ, ಬೇಡ ಬೇಡವೆಂದು ಎಷ್ಟು ಬೇಡಿಕೊಂಡರೂ ಇಲಿ ಹಿಡಿಯುವುದಕ್ಕೆ ಹೋಗಿ, ಸಿಕ್ಕಿಬಿದ್ದು, ಕಾಲು ಮುರಿದುಕೊಂಡರೆ, ಅದಕ್ಕೆ ನಾನೇ ಹೊಣೆ? ವನ ರಾಜ, ನೀನೋ ಸ್ವಾಮಿ; ನಾನೋ ಸೇವಕ. ನಿನ್ನ ಕರುಣೆಯಿಂದ ನಾನು ಬದುಕಬೇಕಲ್ಲದೆ ನನಗೆ ಬೇರೆ ಬಲವಿಲ್ಲ. ಸರ್ವಸಮರ್ಥನಾದ ನೀನು ನನ್ನನ್ನು ಏನುಬೇಕಾದರೂ ಮಾಡಬಹುದು. ಹಾಲಲದ್ದು, ನೀರಲದ್ದು. ನನ್ನ ಜೀವ ನಿನ್ನ ಕೈಯಲ್ಲಿದೆ" ಎಂದಿತು.

ನರಿಯ ಮಾತಿಗೆ ಸಿಂಹವು ಉತ್ತರ ಕೊಡುವ ಮೊದಲೇ ಕರಡಿ, ಬೆಕ್ಕು, ತೋಳ, ಮೊಲ, ಕಿರುಬ, ಹಂದಿ, ಒಂಟೆ, ಕೋಣ ಮೊದಲಾದ ಅನೇಕ ಪ್ರಾಣಿಗಳು ತಮ್ಮತಮ್ಮ ಪರಿವಾರಸಮೇತವಾಗಿ ಬಂದು ರಾಯ ನರಿಗೆ ಶಿಕ್ಷೆಯಾಗಿಯೇ ತೀರಬೇಕೆಂದು ಮೊರೆಯಿಟ್ಟವು. ಸಿಂಹವು ಅವುಗಳ ಮೊರೆಗೆ ಕಿವಿಕೊಟ್ಟು ರಾಯನರಿಯನ್ನು ವಿಚಾರಣೆಗೆ ಗುರಿ ಪಡಿಸಿತು.

ಸಿಂಹ ಆರಿಸಿದ ಪ್ರಾಣಿಗಳೆಲ್ಲ ಸೇರಿ, ರಾಯನರಿಯ ಮೇಲಿನ ಆರೋಪಣೆಗಳನ್ನೆಲ್ಲಾ ಪರೀಕ್ಷಿಸಿದುವು. ಕೊನೆಗೆ ರಾಯನರಿಗೆ ಮರಣ ದಂಡನೆಯನ್ನು ವಿಧಿಸಲಾಯಿತು. ಕುತ್ತಿಗೆಗೆ ಹಗ್ಗ ಬಿಗಿದು ಜೀವ ಹೋಗುವವರೆಗೆ ಅದನ್ನು ನೇತುಹಾಕಬೇಕೆಂದು ತೀರ್ಮಾನವಾಯಿತು.

ಆಗ ರಾಯನರಿಯನ್ನು ವಿಶ್ವಾಸದಿಂದ ಕಾಣುತ್ತಿದ್ದ ಮುದಿ ಹೋತವೇ ಮೊದಲಾದ ಕೆಲವು ಪ್ರಾಣಿಗಳು ಅದರ ಅಂತ್ಯಕಾಲವನ್ನು

ನೋಡಲಾರದೆ ಸಿಂಹದ ಸಭೆಯಿಂದ ಎದ್ದು ಹೋದುವು. ಅಷ್ಟು ಪ್ರಾಣಿಗಳು ತನ್ನ ಸಭೆಯನ್ನು ಬಿಟ್ಟು ಹೋದುದನ್ನು ನೋಡಿ, ರಾಯನರಿಯನ್ನು ಕೊಲ್ಲಲು ಸಿಂಹವೂ ಕೊಂಚ ಹಿಂದುಮುಂದು ನೋಡಿತು. ಆದರೂ ಕಡೆಗೆ ರಾಯನರಿಗೆ ಮರಣದಂಡನೆಯೇ ಸ್ಥಿರವಾಯಿತು.

ತೋಳವೂ ಕರಡಿಯೂ ಸೇರಿ ರಾಯನರಿಯನ್ನು ವಧ್ಯಸ್ಥಾನಕ್ಕೆ ಕರೆದೊಯ್ದುವು. ಕತ್ತಿಗೆ ಬಿಗಿಯುವ ಹಗ್ಗವನ್ನು ಹಿಡಿದುಕೊಂಡು ಕರಿಬೆಕ್ಕು ಮುಂದೆ ಓಡಿತು. ರಾಜನೂ ರಾಣಿಯೂ ಪರಿವಾರದವರೂ ವಧ್ಯಸ್ಥಾನದ ಮುಂದೆ ತಮಗಾಗಿ ಏರ್ಪಡಿಸಿದ್ದ ಪೀಠಗಳಲ್ಲಿ ಕುಳಿತರು.

೬

ರಾಯನರಿಯ ಕುತ್ತಿಗೆಗೆ ನೇಣು ಸಿದ್ಧವಾಯಿತು. ಆದರೂ ರಾಯನರಿ ನಿರಾಶೆಪಡಲಿಲ್ಲ. ಏನಾದರೂ ಉಪಾಯಮಾಡಿ ಈ ಗಂಡಾಂತರದಿಂದಲೂ ಪಾರಾಗುವೆನೆಂದು ಯೋಚಿಸಿ, "ಮೃಗರಾಜ, ನನ್ನ ಸಾವು ಸಮೀಪವಾಯಿತು. ನನ್ನಿಂದ ಇನ್ನು ಯಾವ ಪ್ರಾಣಿಗೂ ಏನೂ ತೊಂದರೆಯಾಗುವುದಿಲ್ಲ. ನಾಳೆಯಿಂದ ಎಲ್ಲರೂ ನಿಶ್ಚಿಂತೆಯಿಂದಿರಬಹುದು. ನಾನು ಸಾಯುವುದಕ್ಕೆ ಹೇಗೂ ಸಿದ್ಧನಾಗಿದ್ದೇನೆ. ಸಾಯುವುದಕ್ಕೆ ಮೊದಲು, ನನ್ನ ಮನಸ್ಸಿನಲ್ಲಿ ಇದುವರೆಗೆ ಮುಚ್ಚಿಟ್ಟಿದ್ದ ಹಲವು ಮಾತುಗಳನ್ನಾಡಲು ಅಪ್ಪಣೆ ಕೊಡಬೇಕೆಂದು ಬೇಡುತ್ತೇನೆ" ಎಂದಿತು.

ರಾಜನ ಅಪ್ಪಣೆ ಪಡೆದು, "ಸಾಯುವವನ ಬಾಯಲ್ಲಿ ಸುಳ್ಳು ಬರಬಾರದು, ಮಹಾಸ್ವಾಮಿ. ಆದುದರಿಂದ ಇದ್ದುದನ್ನು ಇದ್ದಂತೆ ಹೇಳುತ್ತೇನೆ. ಚಿಕ್ಕಂದಿನಲ್ಲಿ ನಾನು ಹಸುವಿನಂತೆ ಸಾಧುವಾಗಿದ್ದೆ. ಕುರಿಮರಿಗಳೊಡನೆ ಕುರಿಮರಿಯಂತೆಯೇ ಕುಣಿದಾಡುತ್ತಿದ್ದೆ. ಆದರೆ ಒಂದು ದಿನ ಆಟಕ್ಕಾಗಿ ಒಂದು ಮರಿಯನ್ನು ಕಚ್ಚಿದೆ. ರಕ್ತದ ರುಚಿ ನಾಲಗೆಗೆ ಹತ್ತಿತು. ಅಲ್ಲಿಂದ ಮುಂದೆ ಕುರಿಯನ್ನು ಕಂಡರೆ ಕಚ್ಚುವ ಅಭ್ಯಾಸ ಬಿದ್ದಿತು. ಕುರಿಯಿಂದ ಪ್ರಾರಂಭವಾದ ಈ ಚಾಳಿ ಕೋಳಿ, ಮೊಲ, ಮೀನು, ಅಳಿಲು ಮುಂತಾದವುಗಳಿಗೂ ಮುಂದುವರಿಯಿತು. ಇದು

ಇಷ್ಟಕ್ಕೇ ನಿಂತಿದ್ದರೆ ನಾನು ಬದುಕಿಕೊಳ್ಳುತ್ತಿದ್ದೆ. ಈ ತೋಳದ ಸ್ನೇಹ ಎಂದು ನನಗೆ ತೊಡಗಿತೋ ಅಂದಿನಿಂದ ನನ್ನ ಪತನ ಸ್ಥಿರವಾಯಿತು. ಅದನ್ನು ಈಗ ಹೇಳಿಕೊಂಡು ಏನೂ ಪ್ರಯೋಜನವಿಲ್ಲ. ನಾನಂತೂ ಸಾಯುವೆನು. ತೋಳವನ್ನೇಕೆ ಬೈಯಲಿ? ಆದರೂ ಈ ತೋಳ ನನಗೆ ಪ್ರೋತ್ಸಾಹ ಕೊಡದೆ ಇದ್ದಿದ್ದರೆ ನಾನು ಕಳ್ಳತನ ಕೊಲೆಗಳಿಗೆ ಇಳಿಯುತ್ತಲೇ ಇರಲಿಲ್ಲ. ನನಗೇನು ಚಿನ್ನ ಬೆಳ್ಳಿಗಳಿಗೆ ಕೊರತೆಯೆ? ಮುತ್ತು ಮಾಣಿಕಕ್ಕೆ ದರಿದ್ರವೆ? ನನಗೇನು ಕಡಿಮೆ? ಈ ತೋಳದ ಮಾತು ಕೇಳಿಕೊಂಡು ನಾನು ಈ ಗತಿಗೆ ಬಂದುದಾಯಿತು'' ಎಂದು ನಿಟ್ಟುಸಿರು ಬಿಟ್ಟಿತು.

ರಾಯನರಿ ಚಿನ್ನ, ಬೆಳ್ಳಿ, ಮುತ್ತು, ಮಾಣಿಕಗಳ ಮಾತನ್ನು ಎತ್ತಿದಾಗ ಸಿಂಹದ ಕಿವಿ ನೆಟ್ಟಗಾಯಿತು. "ರಾಯನರಿ, ಈ ನಿನ್ನ ಐಶ್ವರ್ಯವೆಲ್ಲ ಎಲ್ಲಿದೆ?" ಎಂದು ಬಾಯಿಬಿಟ್ಟುಕೊಂಡು ಕೇಳಿತು.

ರಾಯನರಿ ಅದರ ಪ್ರಶ್ನೆಗೆ ನೇರವಾದ ಉತ್ತರ ಕೊಡದೆ, "ಐಶ್ವರ್ಯವೆಂದರೆ ನಾನು ಸಂಪಾದಿಸಿದುದಲ್ಲ, ನಾನು ಕದ್ದುದು. ಆದರೂ ನಾನು ಅದನ್ನು ಕದಿಯದಿದ್ದಿದ್ದರೆ ಮಹಾಸ್ವಾಮಿಯವರ ಜೀವಕ್ಕೆ ಅಪಾಯವಾಗುತ್ತಿತ್ತು" ಎಂದಿತು.

ತನ್ನ ಗಂಡನ ಜೀವಕ್ಕೆ ಅಪಾಯವಾಗುತ್ತಿತ್ತೆಂಬ ಸುದ್ದಿ ಕೇಳಿ ಕಾತರಳಾಗಿ ಸಿಂಹಿ "ರಾಯನರಿ, ನೀನು ಹೇಳಿದುದೇನು? ವಿಶದ ಪಡಿಸು'' ಎಂದು ಆಜ್ಞೆಮಾಡಿತು. ಸಿಂಹವೂ ಅದಕ್ಕೆ ಮಾತನಾಡಲು ಅಪ್ಪಣೆ ಕೊಟ್ಟಿತು.

ರಾಯನರಿ ಕಣ್ಣು ಒರಸಿಕೊಳ್ಳುತ್ತ "ಸಾಮ್ರಾಜ್ಞಿ, ನಾನು ಏನು ಹೇಳಲಿ! ನಮ್ಮ ಸಾಮ್ರಾಟನನ್ನು ಕೊಲ್ಲಲು ಅವನ ಸ್ವಂತ ಪ್ರಜೆಗಳೆ ಪ್ರಯತ್ನಿಸುತ್ತಿದ್ದರು. ಈ ಪ್ರಯತ್ನದಲ್ಲಿ ನನ್ನ ತಂದೆಯೂ ಸೇರಿದ್ದನೆಂದು ಹೇಳಿಕೊಳ್ಳಲು ನನಗೆ ನಾಚಿಕೆಯಾಗುತ್ತದೆ. ಆದರೆ ರಾಜಭಕ್ತಿಯ ಮುಂದೆ ಪಿತೃಭಕ್ತಿ ಅಷ್ಟೇನೂ ದೊಡ್ಡದಲ್ಲ. ನಾನು ಹೇಳಿದ ಐಶ್ವರ್ಯ ನನ್ನ ತಂದೆಗೆ ನೆಲದಲ್ಲಿ ಸಿಕ್ಕಿತು. ಅದು ಸಿಕ್ಕಿದೊಡನೆ

ಅವನಿಗೆ ತಲೆ ತಿರುಗಿತು. ತನ್ನಷ್ಟು ದೊಡ್ಡ ಪ್ರಾಣಿ ಕಾಡಿನಲ್ಲಿ ಬೇರಾವುದೂ ಇಲ್ಲವೆಂದು ಅವನು ಭಾವಿಸತೊಡಗಿದನು. ತನಗೆ ಸಿಕ್ಕಿದ ಐಶ್ವರ್ಯದಿಂದ ಒಂದು ದೊಡ್ಡ ಸೈನ್ಯವನ್ನು ಸಿದ್ಧಗೊಳಿಸಿ, ಮೃಗರಾಜನಾದ ಸಿಂಹವನ್ನು ಕೊಂದು, ಈ ಕೂದಲುಕರಡಿಗೆ ಪಟ್ಟಕಟ್ಟಬೇಕೆಂದು ನನ್ನ ತಂದೆ ಇಲ್ಲಿ ನಿಂತಿರುವ ಮುದಿಹೋತ, ಕರಿಬೆಕ್ಕು, ತೋಳ, ಕಿರುಬಗಳೊಡನೆ ಮಂತ್ರಾಲೋಚನೆ ಮಾಡಿದನು. ಅವನೇನೋ ತಾನು ಯೋಚಿಸಿದ್ದಂತೆಯೇ ನಡೆಸಿಬಿಡುತ್ತಿದ್ದನು. ಆದರೆ ಆ ಆಲೋಚನೆಯನ್ನು ಮುದಿಹೋತ ತನ್ನ ಹೆಂಡತಿಗೆ ತಿಳಿಸಿತು. ಅದು ನನ್ನ ಹೆಂಡತಿಗೆ ತಿಳಿಸಿತು. ಅದರಿಂದ ನಾನು ಸಕಾಲದಲ್ಲಿ ತಿಳಿದೆ. ಮಹಾಸ್ವಾಮಿಯವರ ಮೇಲಿನ ಪ್ರೀತಿಗೌರವಗಳಿಂದ ನಾನು ಈ ಪ್ರಯತ್ನವನ್ನು ಹೇಗಾದರೂ ಮುರಿಯಬೇಕೆಂದು ಸದಾ ಮೂರುಕಾಲವೂ ನನ್ನ ತಂದೆಯನ್ನು ಹಿಂಬಾಲಿಸುತ್ತಿದ್ದೆ. ಅವನು ಐಶ್ವರ್ಯವನ್ನು ಹೂತಿಟ್ಟಿದ್ದ ಸ್ಥಳ ಒಂದು ದಿನ ನನಗೆ ಗೊತ್ತಾಯಿತು. ಆಗ ನಾನೂ ನನ್ನ ಹೆಂಡತಿಯೂ ಯಾರಿಗೂ ಗೊತ್ತಿಲ್ಲದಂತೆ ರಾತ್ರಿಯೆಲ್ಲಾ ಕೆಲಸಮಾಡಿ ಆ ಐಶ್ವರ್ಯವನ್ನೆಲ್ಲಾ ಬೇರೆ ಕಡೆಗೆ ಸಾಗಿಸಿಬಿಟ್ಟೆವು. ಆವೇಳೆಗೆ ನನ್ನ ತಂದೆ ಸೈನ್ಯವನ್ನೆಲ್ಲಾ ಸಿದ್ಧಪಡಿಸಿಕೊಂಡು, ಅದಕ್ಕೆ ಸಂಬಳ ಕೊಡಬೇಕೆಂದು ತಾನು ಐಶ್ವರ್ಯವನ್ನು ಹೂಳಿಟ್ಟಿದ್ದ ಸ್ಥಳಕ್ಕೆ ಬಂದನು. ಬಂದು, ಅಲ್ಲಿ ಏನೂ ಕಾಣಿಸದೆ, ಬಹುವಾಗಿ ದುಃಖಪಟ್ಟನು. ಕಡೆಗೆ, ದುಃಖವನ್ನು ತಾಳಲಾರದೆ ನೇಣು ಹಾಕಿಕೊಂಡು ಸತ್ತನು. ಹೀಗೆ, ಮಹಾಸ್ವಾಮಿಯವರ ಜೀವವನ್ನು ಉಳಿಸುವುದಕ್ಕೋಸ್ಕರ ನಾನು ನನ್ನ ತಂದೆಯ ಸಾವಿಗೆ ಕಾರಣನಾದೆ. ನನ್ನ ತಂದೆ ಕೆಟ್ಟ ಕೆಲಸ ಮಾಡಿದುದಕ್ಕೆ ಸತ್ತರೆ, ನಾನು ಒಳ್ಳೆಯ ಕೆಲಸ ಮಾಡಿದುದರಿಂದ ಸಾಯಬೇಕಾಗಿದೆ. ಇನ್ನು ಹೆಚ್ಚು ಹೇಳಿ ಏನು ಪ್ರಯೋಜನ? ನಾನು ಸಾವಿಗೆ ಸಿದ್ಧನಾಗಿದ್ದೇನೆ, ಮಹಾಸ್ವಾಮಿ" ಎಂದಿತು.

ನರಿಯ ಗುಣಾಕಾರ ಸರಿಯಾಗಿತ್ತು. ನರಿಯನ್ನು ಕೊಲ್ಲುವ ಬದಲು ನಯವಾಗಿ ಅದರ ಐಶ್ವರ್ಯವನ್ನು ಅಪಹರಿಸಬೇಕೆಂದು ಸಿಂಹ ಲೆಕ್ಕಾಚಾರಮಾಡಿ, ಅದನ್ನು ಹತ್ತಿರ ಕರೆದು, " ರಾಯನರಿ, ನಿನ್ನಂತಹ

ನರಿಯ ಮಾತಿಗೆ ಕಾಸಿನ ಬೆಲೆ ಕೂಡ ಕೊಡಬಾರದು. ಆದರೂ ನಾನು ನಿನ್ನನ್ನು ನಂಬುತ್ತೇನೆ. ನನಗೋಸ್ಕರ ನೀನು ಅಂದು ಅಪಹರಿಸಿದ ಐಶ್ವರ್ಯವನ್ನು ನನಗೆ ತೋರಿಸು. ನಾನು ನಿನ್ನನ್ನು ಕ್ಷಮಿಸಿ ಜೀವ ದೊಂದಿಗೆ ಬಿಡುತ್ತೇನೆ" ಎಂದಿತು.

ಅದಕ್ಕೆ ನರಿ "ಸ್ವಾಮಿ, ನಾನು ಕೊಡುವುದೇನು ಬಂದಿತು; ಆ ಐಶ್ವರ್ಯ ತಮ್ಮದು. ತಮಗಾಗಿ ನಾನು ಅದನ್ನು ಕಾಯ್ದಿರಿಸಿದ್ದೇನೆ. ಗಂಗಾನದಿಯ ಎಡ ದಡದಲ್ಲಿ ಒಂದು ಕಾಡಿದೆ. ಆ ಕಾಡಿನಲ್ಲಿ ಎರಡು ಅರಳಿ ಮರಗಳಿವೆ. ಅವುಗಳ ನಡುವೆ ಆ ಐಶ್ವರ್ಯವನ್ನೆಲ್ಲ ನಾನು ಹೂತಿಟ್ಟಿದ್ದೇನೆ. ನನ್ನ ಮಾತಿನಲ್ಲಿ ತಮಗೆ ನಂಬಿಕೆಯಿಲ್ಲದಿದ್ದರೆ, ಈ ಮೊಲವನ್ನು ಕೇಳಿ" ಎಂದು ಹೇಳಿ, ಆ ಮೊಲವನ್ನು ಕರೆದು, "ಮೊಲ, ನಿನಗೆ ಗಂಗಾ ನದಿ ಗೊತ್ತಲ್ಲವೆ?" ಎಂದಿತು. ಮೊಲ ಗೊತ್ತಿದೆಯೆಂದಿತು. "ಗಂಗಾ ನದಿಯ ಎಡದಡದ ಕಾಡು ಗೊತ್ತಲ್ಲವೆ?" ಎಂದು ಪುನಃ ನರಿ ಕೇಳಿತು. ಮೊಲ ಗೊತ್ತಿದೆಯೆಂದಿತು. "ಆ ಕಾಡಿನಲ್ಲಿ ಎರಡು ಅರಳಿ ಮರಗಳಿರುವುದು ಗೊತ್ತಲ್ಲವೆ?" ಎಂದು ಮತ್ತೆ ನರಿ ಕೇಳಿತು. ಮೊಲ ಗೊತ್ತಿದೆಯೆಂದಿತು. "ಸರಿ, ನೀನು ಇನ್ನು ಹೋಗು" ಎಂದು ನರಿ ಮೊಲವನ್ನು ಆಚೆ ಕಳುಹಿಸಿ, "ನೋಡಿದಿರಾ, ಸ್ವಾಮಿ. ನಾನು ಸುಳ್ಳು ಹೇಳಿಯೇನೆ? ಆ ಐಶ್ವರ್ಯವನ್ನೆಲ್ಲಾ ನಾನು ತಮಗೆ ಒಪ್ಪಿಸಿದುದಕ್ಕೆ ಇದೇ ಸಾಕ್ಷಿ" ಎಂದು ಒಂದು ಹುಲ್ಲಿನ ಎಸಳನ್ನು ಎತ್ತಿಕೊಂಡು, ಸಿಂಹದ ಕೈಯಲ್ಲಿ ಇರಿಸಿತು.

ಸಿಂಹಕ್ಕೆ ತನ್ನ ಕೈಗೆ ಆ ಐಶ್ವರ್ಯ ಬಂದಷ್ಟೇ ಸಂತೋಷವಾಯಿತು. ಅಲ್ಲಿಯೇ ರಾಯನರಿಯ ಸೆರೆಯನ್ನು ಬಿಡಿಸಿ, ಸಿಂಹ ಅದನ್ನು ತನ್ನ ಪಕ್ಕದ ಪೀಠದಲ್ಲಿ ಕುಳ್ಳಿರಿಸಿಕೊಂಡಿತು. ಅದೇ ಸಮಯದಲ್ಲಿ, ರಾಯನರಿ ತನ್ನ ಜೀವವುಳಿಸಿದ ಕೃತಜ್ಞತೆಗಾಗಿ ಸಿಂಹ ಅದಕ್ಕೆ ಅನೇಕ ಬಿರುದುಗಳನ್ನು ಕೊಟ್ಟು ಮರ್ಯಾದೆಮಾಡಿತು. ರಾಯನರಿ ಹೀಗೆ ಅನೇಕ ವಿಧದಲ್ಲಿ ಅರಸನಿಂದ ಉಪಚಾರ ಪಡೆದರೂ, ಒಳಗೊಳಗೆಯೆ ನಗುತ್ತಿತ್ತು.

ಮರಣದಂಡನೆಗೆ ಗುರಿಯಾಗಿದ್ದ ರಾಯನರಿ ಬಿಡುಗಡೆ ಪಡೆದುದೂ ಅಲ್ಲದೆ ಅರಸನಿಂದ ಮನ್ನಣೆ ಪಡೆದುದನ್ನೂ ಕಂಡು ತೋಳವೂ ಕರಡಿಯೂ ಸಹಿಸಲಾರದೆ ಪುನಃ ಅರಸನಿಗೆ ದೂರು ಹೇಳಿಕೊಂಡವು. ಸಿಂಹವು ತೋಳ ಕರಡಿಗಳೆರಡನ್ನೂ ಸೆರೆಮನೆಗೆ ಸೇರಿಸುವಂತೆ ಆಜ್ಞೆ ಮಾಡಿತು. ಅವುಗಳಿಗೆ ಆದ ಗತಿ ಕಂಡು, ಮಿಕ್ಕ ಪ್ರಾಣಿಗಳು ಬಾಯಿ ಮುಚ್ಚಿಕೊಂಡವು. ಮಿಕ್ಕ ಪ್ರಾಣಿಗಳು ರಾಯನರಿಯ ಜೊತೆಯಲ್ಲಿ ಕೊಂಚ ದೂರ ಹೋಗಿ ಅದನ್ನು ಕಳುಹಿಸಿಬರಬೇಕೆಂದು ಸಿಂಹ ಆಜ್ಞೆಮಾಡಿತು. ಅದರಂತೆ ಕಾಡಿನ ಪ್ರಾಣಿಗಳೆಲ್ಲ ರಾಯನರಿಯನ್ನು ಕಳುಹಿಸಿಕೊಡಲು ಅದರ ಜೊತೆಯಲ್ಲಿ ಹೋದುವು.

೭

ಸ್ವಲ್ಪ ದೂರ ಹೋದ ಮೇಲೆ, ಪ್ರಾಣಿಗಳೆಲ್ಲಾ ಒಂದೊಂದಾಗಿ ಹಿಂದೆ ಹಿಂದೆ ನಿಂತವು. ಒಂದು ಮೊಲ, ಒಂದು ಟಗರು ಮಾತ್ರ ನಡೆದ ದಾರಿಯ ನೆನಪೇ ಆಗದೆ ನರಿಯ ಜೊತೆಯಲ್ಲಿ ಮಾತನಾಡುತ್ತಾ ಹೋದುವು. ದಾರಿಯ ಉದ್ದಕ್ಕೂ ನರಿ ಏನೇನೋ ಕತೆ ಹೇಳುತ್ತಾ ನಡೆಯಿತು. ಕತೆ ಕೇಳುತ್ತಾ ಮೊಲ ಟಗರುಗಳೂ ನಡೆದುವು. ನಡೆದೂ ನಡೆದೂ ನರಿಯ ಮನೆಬಾಗಿಲಿಗೆ ಬಂದುವು.

ಅಲ್ಲಿ ನರಿ, " ಟಗರೆ, ಬಹಳ ದೂರ ನಡೆದು ಬಂದೆ. ಈ ಕಲ್ಲು ಬೆಂಚಿನ ಮೇಲೆ ಕೊಂಚ ವಿಶ್ರಮಿಸಿಕೊ, ಈ ಮೊಲದ ಕೈಯಲ್ಲಿ ಅರಸನಿಗೆ ಒಂದು ಕಾಗದ ಕಳಿಸುತ್ತೇನೆ" ಎಂದು ಟಗರನ್ನು ಹೊರಗೆ ಕುಳ್ಳಿರಿಸಿ, ಮೊಲವನ್ನು ಒಳಕ್ಕೆ ಕರೆದುಕೊಂಡು ಹೋಯಿತು.

ಒಳಕ್ಕೆ ಹೋದ ಒಡನೆಯೆ ತನ್ನ ಹೆಂಡತಿಯನ್ನು ಕರೆದು, " ಲೇ, ಅರಸ ನನ್ನನ್ನು ಅತಿಯಾಗಿ ಆದರಿಸಿ ಕಳುಹಿಸಿದ್ದಾನೆ. ಈ ಹೊತ್ತಿನ ಊಟಕ್ಕೆ ಈ ಮೊಲವನ್ನು ಕೊಟ್ಟಿದ್ದಾನೆ" ಎಂದು ತಟಕ್ಕನೆ ಆ ಮೊಲವನ್ನು ಹಿಡಿದು ಅದರ ಕತ್ತು ಕಿವಿಚಿಬಿಟ್ಟಿತು. ನರಿಯೂ ಅದರ ಹೆಂಡತಿಯೂ ಮಕ್ಕಳೂ ಆ ಮೊಲವನ್ನು ಬೇಯಿಸಿ ತಿಂದುಬಿಟ್ಟುವು.

ಒಳಗೆ ಮೊಲಕ್ಕೆ ಈ ಗತಿಯಾಗುತ್ತಿದ್ದಷ್ಟು ಹೊತ್ತೂ, ಪಾಪ, ಟಗರು ಹೊರಗಡೆ ಕಲ್ಲುಬೆಂಚಿನ ಮೇಲೆ ಕಾಯ್ದುಕೊಂಡು ಕುಳಿತಿತ್ತು. ಕಟ್ಟಕಡೆಗೆ ನರಿ ಹೊರಗೆ ಬಂದು, "ಹೊತ್ತಾಯಿತೆಂದು ಸಿಟ್ಟಾಗಬೇಡ, ಟಗರೆ. ಮೊಲ ಊಟಮಾಡಿಕೊಂಡು ಹೋಗುತ್ತೇನೆಂದಿತು. ಇಷ್ಟು ಹೊತ್ತೂ ಊಟಮಾಡಿತು. ಊಟವಾದ ಮೇಲೆ ಹಾಗೆಯೇ ನಿದ್ದೆ ಮಾಡುವೆನೆಂದಿತು. ಈಗ ನಿದ್ದೆ ಮಾಡುತ್ತಿದೆ. ನೀನು ಹೋಗುತ್ತಾ ಇರು. ಅದೂ ಬಂದು ಬಿಡುತ್ತದೆ. ಎಷ್ಟಾದರೂ ಮೊಲವಲ್ಲವೆ! ಬೇಗ ಬೇಗ ಓಡಿಬರುತ್ತದೆ. ನೀನು ಹೊರಡು" ಎಂದು ಹೇಳಿ, "ಟಗರೆ, ಮೊಲದ ಕೈಯಲ್ಲಿ ಅರಸನಿಗೆ ಏನೋ ಕಾಗದ ಕಳುಹಿಸುವೆನೆಂದು ಹೇಳಿದ್ದೆ. ಅದನ್ನು ನೀನೇ ತೆಗೆದುಕೊಂಡು ಹೋಗಿ ಅರಸನಿಗೆ ಕೊಡು. ಕಾಗದವನ್ನೂ ನೀನೇ ಬರೆದೆಯೆಂದು ಹೇಳಿಕೊಂಡುಬಿಡು. ಅದರಿಂದ ಅರಸನಿಗೆ ನಿನ್ನ ಮೇಲೆ ಇನ್ನೂ ವಿಶ್ವಾಸ ಹೆಚ್ಚಾಗುತ್ತದೆ" ಎಂದು ಮೊಲದ ತಲೆಯನ್ನು ತುರುಕಿದ್ದ ಒಂದು ಚೀಲವನ್ನು ಕೊಟ್ಟು ಅದನ್ನು ಕಳುಹಿಸಿತು.

ಅರಸನ ಅನುಗ್ರಹವನ್ನು ಸಂಪಾದಿಸಬೇಕೆಂಬ ಆಸೆಯಿಂದ ಟಗರು ವೇಗವಾಗಿ ಓಡಿ ಓಡಿ ಸಿಂಹದ ಸಮೀಪಕ್ಕೆ ಬಂದು, ತಾನು ತಂದ ಚೀಲವನ್ನು ಒಪ್ಪಿಸಿತು. "ವನರಾಜ, ರಾಯನರಿ ನಿನಗೊಂದು ಪತ್ರವನ್ನು ಕಳುಹಿಸಿದೆ. ಅದರೊಳಗಿನ ಒಕ್ಕಣೆಯನ್ನು ರಾಯನರಿ ಹೇಳಿತಾದರೂ, ಅದನ್ನು ಮುದ್ದಾಗಿ ಬರೆದವನು ನಾನೇ" ಎಂದು ಹೇಳಿಕೊಂಡಿತು. ಹೀಗೆ ಹೆಮ್ಮೆಯಿಂದ ಹೇಳಿಕೊಂಡು, ಚೀಲದೊಳಕ್ಕೆ ಕೈಹಾಕಿ ಮೊಲದ ತಲೆಯನ್ನು ಹೊರಗೆಳೆದು ನೋಡಿ ನಡುಗುತ್ತಾ ನಿಂತುಕೊಂಡಿತು.

ರಾಯನರಿ ತನಗೆ ಕೂಡ ಮೋಸಮಾಡಿತೆಂದು ಸಿಂಹಕ್ಕೆ ನಾಚಿಕೆಯಾಯಿತು, ಸಿಟ್ಟೂ ಬಂದಿತು. ಒಡನೆಯೆ ಚಿರತೆಯನ್ನು ಕರೆಸಿ, ಸೆರೆಯಲ್ಲಿದ್ದ ತೋಳ ಕರಡಿಗಳನ್ನು ಬಿಡಿಸಿ, "ನೀವು ನಿರ್ದೋಷಿಗಳು. ರಾಯನರಿಯ ಮೋಸದ ಮಾತುಗಳಿಗೆ ಮರುಳಾಗಿ ನಾನು ನಿಮ್ಮನ್ನು ಶಿಕ್ಷಿಸಿದೆ. ಆದರೆ ಇಂದಿನಿಂದ ರಾಯನರಿಯನ್ನು ನೀವು ಎಲ್ಲಿ ಕಂಡರೆ

ಏನೂ ಬೇಕಾದರೂ ಮಾಡಬಹುದೆಂದು ನಾನು ನಿಮಗೆ ಅಪ್ಪಣೆ ಕೊಟ್ಟಿದ್ದೇನೆ. ರಾಯನರಿಯು ಜೊತೆಯಲ್ಲಿ ಸೇರಿಕೊಂಡು ನಮ್ಮ ಮೊಲವನ್ನು ಸಾಯಿಸಿದ ಈ ಟಗರನ್ನೂ ನಿಮ್ಮ ವಶಕ್ಕೆ ಕೊಟ್ಟಿದ್ದೇನೆ'' ಎಂದಿತು.

ಅದೇ ವೇಳೆಗೆ ಒಂದು ಕಾಗೆ ಕಾಕಾಯೆಂದು ಕೂಗಿಕೊಳ್ಳುತ್ತ ಬಂದು, "ಮಹಾರಾಜ, ರಾಯನರಿಯಿಂದ ನಾನು ಹಾಳಾದೆ. ಈಗ ಸ್ವಲ್ಪ ಹೊತ್ತಿಗೆ ಮುಂಚೆ, ನಾನೂ ನನ್ನ ಹೆಂಡತಿಯೂ ಹೊಳೆಯ ಪಕ್ಕದ ಹುಲ್ಲುಗಾವಲಿನಲ್ಲಿ ಆಟವಾಡುತ್ತಿದ್ದೆವು. ರಾಯನರಿ ಅಲ್ಲೇ ಸತ್ತಂತೆ ಮಲಗಿತ್ತು. ನಾವು ಆ ದೇಹದ ಸುತ್ತಾ ಹಾರಾಡಿದೆವು. ದೇಹದಲ್ಲಿ ಜೀವವಿದ್ದಂತೆ ಇರಲಿಲ್ಲ. ಆಗ ನನ್ನ ಹೆಂಡತಿ ಹತ್ತಿರ ಹೋಗಿ ಅದು ಉಸಿರಾಡುತ್ತಿದೆಯೇ ಎಂದು ಮೂಗಿನ ಬಳಿ ನೋಡುತ್ತಿದ್ದಾಗ ಆ ರಾಯನರಿ ಬಾಯಿಬಿಟ್ಟು ಅದರ ತಲೆ ಕಡಿದುಬಿಟ್ಟಿತು. ನಾನು ಹಾರಿ ಹೋಗಿ ನನ್ನ ಜೀವವುಳಿಸಿಕೊಂಡೆ. ನನ್ನ ಹೆಂಡತಿ ರಾಯ ನರಿಯ ಬಾಯಿಗೆ ತುತ್ತಾದಳು'' ಎಂದು ಗೋಳಾಡಿತು.

ಆ ಅನ್ಯಾಯವನ್ನು ಕೇಳಿ ಸಿಂಹಕ್ಕೂ ಸಿಟ್ಟು ಮಿತಿಮೀರಿತು. "ಈ ರಾಯನರಿಯ ಅನೇಕ ಅನ್ಯಾಯಗಳನ್ನು ಸಹಿಸಿ ಸಹಿಸಿ ನಮಗೂ ಸಾಕಾಗಿ ಹೋಗಿದೆ. ಇನ್ನು ಮೂರು ದಿನಗಳೊಳಗಾಗಿ ಕಾಡಿನ ಮೃಗಗಳೆಲ್ಲಾ ಇಲ್ಲಿ ಬಂದು ಸೇರಲಿ. ಒಟ್ಟಾಗಿ ಹೋಗಿ ಈ ರಾಯನರಿಯನ್ನೂ ಅದರ ಸರ್ವ ಸಂತತಿಯನ್ನೂ ಧ್ವಂಸಮಾಡಿಬಿಡೋಣ'' ಎಂದು ಗರ್ಜಿಸಿತು.

ರಾಯನರಿಯ ಮೇಲೆ ಇನ್ನೂ ವಿಶ್ವಾಸವಿಟ್ಟಿದ್ದ ಮುದಿಹೋತ ಆ ರಾಜಾಜ್ಞೆಯನ್ನು ಕೇಳಿತು. ಕೇಳಿ, ಸಕಾಲದಲ್ಲಿ ರಾಯನರಿಯನ್ನು ಎಚ್ಚರಿಸಬೇಕೆಂದು ಅದೇ ಸಂಜೆ ರಾಯನರಿಯ ಮನೆಗೆ ಹೋಯಿತು.

೮

ಅತ್ತ, ರಾಯನರಿ ಕಾಡಿನಲ್ಲಿ ಪಾರಿವಾಳಗಳನ್ನು ಹುಡುಕಿಕೊಂಡು ಹೊರಟಿತ್ತು. ಹಾಗೆ ಹುಡುಕಿಕೊಂಡು ಹೋಗುವಾಗ, ಒಂದು ಕಡೆ

ಒಂದು ಬಡಕಲು ಕುದುರೆ ಕಣ್ಣೀರು ಸುರಿಸುತ್ತಾ ಕುಳಿತಿದ್ದುದನ್ನು ರಾಯನರಿ ಕಂಡಿತು.

ಕಂಡು, ಅದರ ಹತ್ತಿರ ಹೋಗಿ "ಅಯ್ಯಾ, ಏಕೆ ಅಳುತ್ತಿರುವೆ?" ಎಂದು ಕೇಳಿತು.

ಅದಕ್ಕೆ ಆ ಕುದುರೆ "ಅಯ್ಯೋ! ನನ್ನ ಕತೆಯನ್ನು ಏನು ಹೇಳಲಿ? ಈ ಕಾಡಿನ ಆಚೆ ಒಂದು ಊರು ಇದೆ. ಅಲ್ಲಿ ಒಬ್ಬ ಗಾಡಿಯವ ನಿದ್ದಾನೆ. ನಾನು ಈಗ ಹತ್ತುವರ್ಷಗಳಿಂದ ಅವನ ಗಾಡಿಯೆಳೆಯು ತ್ತಿದ್ದೆ. ಈಚೆಗೆ ನನಗೆ ವಯಸ್ಸಾಯಿತು, ಶಕ್ತಿ ಕಡಿಮೆಯಾಯಿತು, ಮೊದಲಿನಂತೆ ಎಳೆಯಲಾಗುವುದಿಲ್ಲ. ಆದ್ದರಿಂದ, ನನ್ನ ಯಜಮಾನನು, ನಾನು ಹಿಂದೆ ಮಾಡಿದ ಸೇವೆಯನ್ನೆಲ್ಲಾ ಮರೆತು, ಈಗ ನನ್ನನ್ನು ಮನೆ ಯಿಂದ ಅಟ್ಟಿಬಿಟ್ಟಿದ್ದಾನೆ. ನನಗೆ ಒಂದು ಹುಲಿಯ ಬಲವಿದೆಯೆಂದು ತೋರಿಸಿಕೊಂಡರೆ ಪುನಃ ಮನೆಗೆ ಸೇರಿಸುತ್ತಾನಂತೆ. ಈ ಮುದಿವಯಸ್ಸಿ ನಲ್ಲಿ ನನಗೆ ಹುಲಿಯ ಬಲವೆಲ್ಲಿಂದ ಬರಬೇಕು? ಅಯ್ಯೋ! ನಾನೇನು ಮಾಡಲಿ?" ಎಂದು ಬಿಕ್ಕಿಬಿಕ್ಕಿ ಅಳತೊಡಗಿತು.

ಆಗ ರಾಯನರಿ ಅದರ ಬೆನ್ನು ತಟ್ಟುತ್ತಾ "ಅಯ್ಯೋ! ಇಷ್ಟೇ ತಾನೆ! ಇದಕ್ಕೆ ಏಕೆ ಹೀಗೆ ಗೋಳಾಡಬೇಕು? ನಿನಗೆ ಹುಲಿಯ ಬಲವಿದೆ ಯೆಂಬುದನ್ನು ನಿನ್ನ ಯಜಮಾನನಿಗೆ ತೋರಿಸುವ ಭಾರ ನನ್ನದು. ನಾನು ಹೇಳಿದಂತೆ ನೀನು ಕೇಳು; ಸುಖವಾಗಿ ಪುನಃ ಮನೆ ಸೇರಿಕೊಳ್ಳ ಬಹುದು. ನೀನು ಇಲ್ಲಿ ಈ ಹುಲ್ಲಿನ ಮೇಲೆ ಮಲಗಿಕೊ. ನಿನ್ನ ಹತ್ತಿರ ಒಂದು ಹುಲಿ ಬಂದರೂ ಅಲ್ಲಾಡಬೇಡ" ಎಂದಿತು. ಕುದುರೆ ಅದು ಹೇಳಿದಂತೆಯೇ ಕೇಳುವೆನೆಂದು ಒಪ್ಪಿಕೊಂಡಿತು.

ಹೀಗೆ ಕುದುರೆಯನ್ನು ಒಪ್ಪಿಸಿ, ರಾಯನರಿ ಒಂದು ಹುಲಿಯನ್ನು ಹುಡುಕಿಕೊಂಡು ಹೊರಟಿತು. ಹತ್ತಿರದಲ್ಲಿಯೇ ಒಂದು ಗವಿಯಲ್ಲಿ ಒಂದು ಹುಲಿಯೂ ಸಿಕ್ಕಿತು. ರಾಯನರಿ ಅದಕ್ಕೆ ಬಗ್ಗಿ ನಮಸ್ಕಾರ ಮಾಡಿ, "ಹುಲಿರಾಯ, ಇಲ್ಲಿಯೇ ಹತ್ತಿರದಲ್ಲಿ ಒಂದು ಕುದುರೆ ಸತ್ತು ಬಿದ್ದಿದೆ. ನೀನು ಮೊದಲು ಬಂದು ಅದನ್ನು ತಿಂದರೆ, ಉಳಿದ ಎಂಜಲನ್ನು ನಾನು ಆ ಮೇಲೆ ತಿನ್ನುತ್ತೇನೆ" ಎಂದಿತು.

ಹುಲಿ ತನ್ನ ಆಹಾರವು ತನಗೆ ಅನಾಯಾಸವಾಗಿ ಸಿಕ್ಕಿತೆಂದು ಸಂತೋಷಪಟ್ಟು ರಾಯನರಿಯ ಜೊತೆಯಲ್ಲಿ ಹೋಯಿತು. ಕುದುರೆ ಸತ್ತಹಾಗೆ ಬಿದ್ದುಕೊಂಡಿದ್ದ ಕಡೆಗೆ ಬಂದಾಗ, ರಾಯನರಿ "ಹುಲಿರಾಯ, ಇದು ದೊಡ್ಡ ಕುದುರೆ. ಇದನ್ನು ಇಲ್ಲಿಯೇ ತಿನ್ನುವುದಕ್ಕಿಂತ ನಿನ್ನ ಗವಿಯಲ್ಲಿ ತಿಂದರೆ ಹೆಚ್ಚು ಸೊಗಸು. ಒಂದು ಕೆಲಸ ಮಾಡೋಣ. ಈ ಕುದುರೆಯನ್ನು ಒಂದು ಹಗ್ಗದಿಂದ ನಿನ್ನ ನಡುವಿಗೆ ಬಿಗಿಯುತ್ತೇನೆ. ನೀನು ಇದನ್ನು ನಿನ್ನ ಗವಿಗೆ ಸುಲಭವಾಗಿ ಸಾಗಿಸಬಹುದು. ನಾನೂ ಹಿಂದುಗಡೆಯಿಂದ ತಳ್ಳುತ್ತೇನೆ" ಎಂದಿತು.

ಹುಲಿ ಹಿಂದುಮುಂದು ನೋಡದೆ ರಾಯನರಿಯ ಮಾತಿಗೆ ಒಪ್ಪಿಕೊಂಡಿತು, ಕುದುರೆಯ ಹತ್ತಿರ ಬಂದು ನಿಂತುಕೊಂಡಿತು. ರಾಯನರಿ ಹುಲಿಯ ಸೊಂಟದ ಸುತ್ತ ಹಗ್ಗ ಹಾಕುವಂತೆ ನಟಿಸುತ್ತಾ ಅದರ ಹಿಂಗಾಲುಗಳೆರಡನ್ನೂ ಅಲ್ಲಾಡದಂತೆ ಹಗ್ಗದಿಂದ ಬಲವಾಗಿ ಬಿಗಿದು, ಹಗ್ಗದ ಇನ್ನೊಂದು ತುದಿಯನ್ನು ಕುದುರೆಯ ಸೊಂಟಕ್ಕೆ ಕಟ್ಟಿತು. ಕಟ್ಟಿ ಆದ ಮೇಲೆ ಕುದುರೆಯ ಬೆನ್ನು ಚಪ್ಪರಿಸಿ, "ಹುಲಿಯ ಬಲದ ಕುದುರೆ, ಓಡು, ಓಡು, ಓಡು" ಎಂದು ಕೂಗಿತು.

ಆ ಕೂಗು ಕೇಳಿದೊಡನೆ ಕುದುರೆ ನೆಗೆದೆದ್ದು ನಾಗಾಲೋಟದಿಂದ ಓಡಿತು. ಹಳ್ಳಕೊಳ್ಳ, ತಗ್ಗುತಿಟ್ಟು, ನೀರುನೆಲ, ಕಲ್ಲುಮುಳ್ಳು ಏನನ್ನೂ ಲಕ್ಷಿಸದೆ ಹುಲಿಯನ್ನೂ ಎಳೆದುಕೊಂಡು ಕುದುರೆ ಓಡಿತು. ಅದು ಹಾಗೆ ಓಡಿ ಓಡಿ ತನ್ನ ಯಜಮಾನನ ಮನೆಗೆ ಬರುವ ವೇಳೆಗೆ ಆ ಹುಲಿ ಹೆಣವಾಗಿಹೋಗಿತ್ತು.

ತನ್ನ ಮುದಿಕುದುರೆ ಒಂದು ಹುಲಿಯನ್ನು ಮನೆಯ ಬಾಗಿಲಿಗೆ ಎಳೆದುಕೊಂಡು ಬಂದುದನ್ನು ಕಂಡು ಕುದುರೆಯ ಯಜಮಾನನಿಗೆ ಬಹಳ ಸಂತೋಷವಾಯಿತು. ಅವನು ಅದನ್ನು ಪುನಃ ತನ್ನ ಮನೆಗೆ ಸೇರಿಸಿಕೊಂಡನು.

ಹೀಗೆ ಉಪಾಯದಿಂದ ಒಂದು ಹುಲಿಯನ್ನು ಸಾಯಿಸಿ, ರಾಯನರಿ ಪುನಃ ಪಾರಿವಾಳಗಳನ್ನು ಹುಡುಕಿಕೊಂಡು ಹೊರಟಿತು. ಸ್ವಲ್ಪ ಸಮಯದಲ್ಲಿಯೇ ಅದಕ್ಕೆ ಎರಡು ಪಾರಿವಾಳ ಸಿಕ್ಕಿತು.

೬

ರಾಯನರಿ ತಾನು ಹಿಡಿದು ತಂದ ಎರಡು ಪಾರಿವಾಳಗಳನ್ನು ಅಡುಗೆಗೆ ಸಿದ್ಧಗೊಳಿಸುತ್ತಿತ್ತು. ಆಗ ಅಲ್ಲಿಗೆ ಮುದಿಹೋತ ಬಂದು ರಾಜಾಜ್ಞೆಯನ್ನು ಅದಕ್ಕೆ ತಿಳಿಸಿತು. ಅದರಿಂದ ರಾಯನರಿ ಏನೂ ಚಿಂತೆಗೊಳ್ಳಲಿಲ್ಲ. "ಅಯ್ಯೋ, ಇಷ್ಟೇ ತಾನೆ. ಏನೂ ಹೆದರಬೇಕಾದ ಕಾರಣವಿಲ್ಲ. ಈ ರಾತ್ರಿ ಈ ಪಾರಿವಾಳಗಳನ್ನು ತಿಂದು ಸಂತೋಷ ಪಡೋಣ. ನಾಳೆ ಬೆಳಗ್ಗೆ ಎದ್ದು ಹೋಗಿ ಸಿಂಹವನ್ನು ಕಾಣೋಣ. ಈ ಸಿಂಹವನ್ನು ನನ್ನ ಕಿರುಬೆಟ್ಟಿನ ಸುತ್ತ ಆಡಿಸುವ ಶಕ್ತಿ ನನ್ನಲ್ಲಿದೆ" ಎಂದು ಪಾರಿವಾಳಗಳನ್ನು ಅಡುಗೆಯ ಮನೆಗೆ ತೆಗೆದುಕೊಂಡು ಹೋಯಿತು.

ರಾತ್ರಿ ಊಟವಾದ ಮೇಲೆ ಮಲಗಿರುವಾಗ ರಾಯನರಿ ಮುದಿ ಹೋತನನ್ನು ಕುರಿತು "ಸಿಂಹಕ್ಕಾದರೂ ನಾನೇನೂ ಹೆದರುವುದಿಲ್ಲ, ಮಾವಯ್ಯ. ನಾನು ಒಂದು ಸಲ ದಾರಿತಪ್ಪಿ ದಂಡಕಾರಣ್ಯಕ್ಕೆ ಹೋಗಿದ್ದೆ. ಅಲ್ಲಿಯೂ ಹೀಗೆಯೇ ಒಂದು ಮಹಾಸಿಂಹವಿತ್ತು. ಅದು ನನ್ನನ್ನು ಹೆದರಿಸಲು ನೋಡಿತು. ಆದರೆ ಅದರ ದೇಹಬಲಕ್ಕಿಂತ ನನ್ನ ಬುದ್ಧಿಬಲವೇ ಹೆಚ್ಚೆಂದು ನಾನು ಅದಕ್ಕೆ ತೋರಿಸಿಕೊಟ್ಟು ಬಂದೆ. ನಿದ್ದೆ ಬರದೆ ಹೋದರೆ, ಆ ಕತೆ ಹೇಳುತ್ತೇನೆ. ಕೇಳುವೆಯ, ಮಾವಯ್ಯ?" ಎಂದಿತು.

"ಹೇಳು, ಕೇಳೋಣ" ಎಂದಿತು ಮುದಿ ಹೋತ.

ರಾಯನರಿ ತನ್ನ ಕತೆಯನ್ನು ಹೇಳಿತು: "ದಂಡಕಾರಣ್ಯದಲ್ಲಿ ಒಂದು ಸಿಂಹವಿತ್ತೆಂದು ಹೇಳಿದೆನಷ್ಟೆ. ಆ ಸಿಂಹ ಒಂದು ದಿನ ನರಿಜಾತಿಯನ್ನೆಲ್ಲಾ ಹೀಯಾಳಿಸಿ ಏನೋ ಕೆಟ್ಟ ಮಾತನಾಡಿತು. ಆಗ ನಾನು ನನ್ನ ಅಸಮಾಧಾನವನ್ನು ಹೊರಗೆ ತೋರಿಸಿಕೊಳ್ಳದೆ, ಅದರ ಮಾತಿಗೆ ನಾನೂ ಸಮ್ಮತಿ ತೋರಿಸಿದಂತೆ ನಟಿಸಿದೆ. ಆದರೂ ಸಮಯ ಒದಗಿದಾಗ ಆ ಸಿಂಹವನ್ನು ಅದು ಆಡಿದ ಮಾತಿಗಾಗಿ ಸಂಹರಿಸಬೇಕೆಂದು ನಿಶ್ಚಯಮಾಡಿದೆ. ಆ ಸಿಂಹ ಹೇಳಿದ ಮಾತಿಗೆಲ್ಲಾ ನಾನು ಎದುರಾಡದೆ

ಹೊಗುಟ್ಟುತ್ತಿದ್ದುದರಿಂದ ನಾನು ಆ ಸಿಂಹಕ್ಕೆ ಬಹು ಬೇಗನೆ ಬೇಕಾದವನಾದೆ. ಆ ಸಿಂಹಕ್ಕೆ ನನ್ನ ಮಾತಿನಲ್ಲಿ ವಿಶ್ವಾಸಹುಟ್ಟುವ ವರೆಗೂ ಕಾಯ್ದುಕೊಂಡಿದ್ದು, ಒಂದು ದಿನ "ಮೃಗರಾಜ, ನೀನು ಎಲ್ಲಾ ಮಾಂಸಗಳನ್ನೂ ತಿಂದಿರುವವನು. ಕುದುರೆಯ ಮಾಂಸದಷ್ಟು ಚೆನ್ನಾದ ಮಾಂಸ ಬೇರೆ ಉಂಟೆ?" ಎಂದು ಕೇಳಿದೆ. ಅದಕ್ಕೆ ಆ ಸಿಂಹ "ಕುದುರೆ ಎಂದರೆ ಏನು? ಅದು ಹೇಗಿದೆ?" ಎಂದು ಕೇಳಿತು. ಆಗ ನಾನು, ಈ ಸಿಂಹದ ಸಂಹಾರಕ್ಕೆ ಇದೇ ಸಮಯವೆಂದುಕೊಂಡು, "ಅಯ್ಯೋ, ಕುದುರೆಯನ್ನು ಕಂಡಿಲ್ಲವೆ, ನೀನು? ಕುದುರೆಯ ಮಾಂಸ ತಿನ್ನದ ಮೇಲೆ ಹುಟ್ಟಿ ಬದುಕಿರುವುದು ವ್ಯರ್ಥ"ವೆಂದೆ. ಅಂದಿನಿಂದ ಕುದುರೆಯ ಮಾಂಸ ತಿನ್ನಬೇಕೆಂದು ಆ ಸಿಂಹಕ್ಕೆ ಚಪಲ ಹತ್ತಿತು. ಅದಕ್ಕೆ ಆಸೆ ಹೆಚ್ಚಾದುದನ್ನು ಕಂಡು, "ಕಾಡಿನ ಆಚೆ ಒಂದು ಪಟ್ಟಣವಿದೆ. ಅಲ್ಲಿ ಬೇಕಾದಷ್ಟು ಕುದುರೆಗಳಿವೆ" ಎಂದು ಹೇಳಿ, ಅದನ್ನು ಕರೆದುಕೊಂಡು ಹೋಗಿ, ಆ ಪಟ್ಟಣದ ಅರಸನ ಕುದುರೆಗಳನ್ನು ಅದಕ್ಕೆ ಕಾಣಿಸಿದೆ. ಅದು ಮಿಂಚಿನಂತೆ ಹಾರಿ ಒಂದು ಕುದುರೆಯನ್ನು ಕಚ್ಚಿಕೊಂಡು ಬಂದು, ಕಾಡಿನಲ್ಲಿ ತಿಂದಿತು. ಅದೇ ಕುದುರೆಯ ಮಾಂಸದ ರುಚಿ ನಾಲಗೆಗೆ ಹತ್ತಿ ಮಾರನೆಯ ದಿನ ಇನ್ನೊಂದು ಕುದುರೆಯನ್ನು ಹೊತ್ತುಕೊಂಡು ಬಂದಿತು. ಹೀಗೆಯೇ ನಾಲ್ಕು ದಿವಸ ನಡೆಯಿತು. ಹೀಗೆ ದಿನಕ್ಕೆ ಒಂದೊಂದು ಕುದುರೆ ಸಿಂಹದ ಬಾಯಿಗೆ ಬೀಳುವುದನ್ನು ತಿಳಿದು ಆ ಪಟ್ಟಣದ ರಾಜನು ಉಳಿದ ಕುದುರೆಗಳನ್ನು ಒಂದು ದೊಡ್ಡ ಲಾಯದಲ್ಲಿ ಕಟ್ಟಿಸಿದನು. ಆದರೂ ಆ ಸಿಂಹ ನನ್ನ ಪ್ರೋತ್ಸಾಹಕ್ಕೆ ಕಿವಿಕೊಟ್ಟು, ಲಾಯದೊಳಕ್ಕೂ ನುಗ್ಗಿ ಕುದುರೆಯನ್ನು ಕಚ್ಚಿಕೊಂಡು ಹಾರಿ ಬರುತ್ತಿತ್ತು. ಕಡೆಗೆ ರಾಜನು ಆ ಸಿಂಹದ ಹಾವಳಿಯನ್ನು ತಡೆಯಲಾರದೆ, ಅದನ್ನು ಕೊಲ್ಲುವುದಕ್ಕೆ ಒಬ್ಬ ಬೇಟೆಗಾರನನ್ನು ನೇಮಿಸಿದನು. ಅವನು ಸಿಂಹ ರಾತ್ರಿ ಬರುವುದನ್ನೇ ಕಾಯುತ್ತಾ ಬಿಲ್ಲುಬಾಣ ಹಿಡಿದು ಕುಳಿತಿದ್ದನು. ಎಂದಿನಂತೆ ಆ ರಾತ್ರಿಯೂ ಸಿಂಹ ಲಾಯದೊಳಕ್ಕೆ ಹಾರಿ ಬಂದಿತು. ಬೇಟೆಗಾರನು ಅದನ್ನು ಕಂಡು, "ಈ ಸಿಂಹ ಮಿಂಚಿನಂತೆ ಹಾರಿಬಂದಿತು. ನನಗೆ ಇದರ ಮೇಲೆ ಬಾಣ ಬಿಡಲು ಆಗಲಿಲ್ಲ. ಇದು

ಹಿಂದಿರುಗಿ ಹಾರುವಾಗ ಒಂದು ಕುದುರೆಯನ್ನು ಕಚ್ಚಿಕೊಂಡು ಹಾರುತ್ತದೆ. ಆದ್ದರಿಂದ ಆಗ ಇದರ ವೇಗ ಕಡಿಮೆಯಾಗಿರುತ್ತದೆ. ಆ ಸಮಯದಲ್ಲಿ ನಾನು ಬಾಣಬಿಟ್ಟು ಇದನ್ನು ಕೊಲ್ಲಬಹುದು" ಎಂದು ಬಿಲ್ಲನ್ನು ಎಳೆದು ಬಾಣಹೂಡಿ ಸಿದ್ಧನಾದನು. ಅವನು ಎಣಿಸಿದ್ದಂತೆಯೇ ಸಿಂಹ ಕುದುರೆಯನ್ನು ಕಚ್ಚಿಕೊಂಡು ಮೆಲ್ಲಗೆ ಹಾರಿತು. ಬೇಟೆಗಾರನು ಅದೇ ಸಮಯದಲ್ಲಿ ಬಾಣಬಿಟ್ಟನು. ಬಾಣ ತಾಗಿ, ಸಿಂಹ ಅಲ್ಲಿಯೇ ಸತ್ತು ಬಿದ್ದಿತು."

ರಾಯನರಿ ಹೀಗೆಂದು ಹೇಳಿ, "ಆದ್ದರಿಂದ, ನಾನು ಸಿಂಹಕ್ಕಾದರೂ ಹೆದರುವೆನೆಂದು ನೀನು ತಿಳಿಯಬೇಡ. ನಾನು ಮೊದಲೇ ಹೇಳಿದಂತೆ ಸಿಂಹವನ್ನಾದರೂ ಕಿರುಬೆಟ್ಟಿನ ಸುತ್ತ ಆಡಿಸುವ ಶಕ್ತಿ ನನ್ನಲ್ಲಿದೆ. ಆಗಲೇ ಅರ್ಧರಾತ್ರಿಯಾಯಿತು. ಬೆಳಗಾದಮೇಲೆ ಮುಂದಿನ ಕೆಲಸ. ಈಗ ಮಲಗಿಕೊಳ್ಳೋಣ" ಎಂದಿತು.

ರಾಯನರಿ ಹೇಳಿದ ಕತೆ ಸುಳ್ಳುಕತೆಯೆಂದು ಮುದಿಹೋತನಿಗೆ ಗೊತ್ತಿತ್ತು. ಆದರೂ ಇಂತಹ ಸುಳ್ಳುಗಳಿಂದಲೇ ರಾಯನರಿ ತನ್ನ ಕಾರ್ಯವನ್ನು ಸಾಧಿಸುವುದೆಂದೂ ಅದಕ್ಕೆ ಗೊತ್ತಿತ್ತು. ಆದ್ದರಿಂದ ಅದು ರಾಯನರಿಯ ಶಕ್ತಿ ಸಾಮರ್ಥ್ಯಗಳನ್ನು ಮಿತವಾಗಿ ಹೊಗಳಿ, ತಾನೂ ಮಲಗಿಕೊಂಡಿತು.

ಬೆಳಗಾಯಿತು. ರಾಯನರಿ "ನಾನು ಬೇರೆ ದಾರಿಯಿಂದ ಸಿಂಹದ ಬಳಿಗೆ ಬರುತ್ತೇನೆ. ನೀನು ಬೇರೆ ದಾರಿಯಿಂದ ಹೋಗು" ಎಂದು ಮುದಿಹೋತನನ್ನು ಕಳುಹಿಸಿ, "ಇನ್ನು ಮೂರುನಾಲ್ಕು ದಿನಗಳಲ್ಲಿ ಬಂದುಬಿಡುತ್ತೇನೆ. ಮನೆಯಕಡೆ ನೋಡಿಕೊ" ಎಂದು ತನ್ನ ಹೆಂಡತಿಗೆ ಹೇಳಿ, ಹೊರಟಿತು.

## ೧೦

ರಾಯನರಿ ದಾರಿಯಲ್ಲಿ ಕಾಲ ಕಳೆಯದೆ ಬೇಗಬೇಗ ಹೋಗಿ ಸಿಂಹದ ಸಭೆಯನ್ನು ಸೇರಿತು. ಸೇರಿ, ಸಿಂಹದ ಸಿಂಹಾಸನದ ಮುಂದೆ ನಿಂತು ನಮಸ್ಕಾರಮಾಡಿ, "ಮಹಾಸ್ವಾಮಿ, ನಾನು ಈ ಕಾಡಿನಲ್ಲಿ

ಬದುಕುವುದೆ ಕಷ್ಟವಾಗಿಬಿಟ್ಟಿದೆ. ಇಲ್ಲಸಲ್ಲದುದನ್ನು ಸೃಷ್ಟಿಸಿಕೊಂಡು ಬರುವ ಈ ಪ್ರಾಣಿಗಳಿಂದ ಯಾವ ಗಳಿಗೆಯಲ್ಲಿ ಏನಾಗುವುದೋ ಎಂದು ನನಗೆ ಬಹಳ ಭಯವಾಗಿದೆ" ಎಂದು ಮೊದಲುಮಾಡಿತು.

ಅದಕ್ಕೆ ಸಿಂಹ ಒಂದು ಗರ್ಜನೆ ಗರ್ಜಿಸಿ, "ಸಾಕು, ಸಾಕು, ರಾಯನರಿ. ನಿನ್ನ ವಿಷಯವೆಲ್ಲಾ ನನಗೆ ಗೊತ್ತು. ಈ ಸಲ ನಿನ್ನ ಮಾತುಗಳಿಗೆ ಯಾರೂ ಮರುಳಾಗುವುದಿಲ್ಲ. ಇದುವರೆಗೆ ನೀನು ಮಾಡಿದ ಅನ್ಯಾಯಗಳಿಗೆ ಈ ಹೊತ್ತೇ ಕೊನೆ. ನೀನು ಸದ್ಯದಲ್ಲಿಯೇ ಸಾಯ್ಯ ಬೇಕಾಗಿರುವುದರಿಂದ ನಿನ್ನ ಹತ್ತಿರ ಹೆಚ್ಚು ಮಾತನಾಡುವುದು ವ್ಯರ್ಥ" ಎಂದಿತು.

ಆದರೂ ರಾಯನರಿ ತನಗೆ ಉಂಟಾದ ಭಯವನ್ನು ಹೊರಗೆ ತೋರಿಸದೆ, "ಮಹಾಸ್ವಾಮಿ, ಸಾಯುವೆನೆಂಬ ಹೆದರಿಕೆ ನನಗೆ ಸ್ವಲ್ಪವೂ ಇಲ್ಲ. ಹುಟ್ಟಿದವನು ಎಂದಿದ್ದರೂ ಸಾಯಲೇಬೇಕೆಂದು ಹಿರಿಯರೆಲ್ಲರೂ ಹೇಳುತ್ತಾರೆ. ಆದರೆ ಅನ್ಯಾಯವಾದ ಆರೋಪಣೆಗಳಿಗೆ ಗುರಿಯಾಗಿ ಸಾಯಬಾರದೆಂದು ತಮ್ಮಿಂದ ನ್ಯಾಯವಿಮರ್ಶೆಯನ್ನು ಅಪೇಕ್ಷಿಸು ತ್ತೇನೆ. ನಾನು ಯಾವಾಗಲೂ ನ್ಯಾಯಕ್ಕಾಗಿಯೆ ಹೊಡೆದಾಡುವವನು. ಆದರೆ ಅದನ್ನು ನಾನೇ ಹೇಳಿಕೊಳ್ಳಬಾರದು" ಎಂದಿತು.

"ಓಹೋ ! ನಿನಗೆ ನ್ಯಾಯವಿಮರ್ಶೆಯ ಬುದ್ಧಿಯೂ ಇದೆಯೊ ?" ಎಂದು ಸಿಂಹ ಅದನ್ನು ಹಂಗಿಸಿತು.

"ಮಹಾಸ್ವಾಮಿಯವರು, ತಮ್ಮ ಅನೇಕ ಕಾರ್ಯಗಳ ಮಧ್ಯೆ, ಈ ಬಡ ಸೇವಕನ ಅಲ್ಪಸೇವೆಯನ್ನು ಮರೆತಿರುವುದು ಸಹಜವಾಗಿಯೇ ಇದೆ. ಅದನ್ನು ನಾನೇ ಹೇಳಿಕೊಳ್ಳಬಾರದಾದರೂ ಹೇಳುತ್ತೇನೆ. ಎರಡು ವರ್ಷದ ಕೆಳಗೆ, ಒಬ್ಬ ಮನುಷ್ಯನೂ ಒಂದು ಹಾವೂ ತಮಗೆ ನ್ಯಾಯ ದೊರಕಬೇಕೆಂದು ಇದೇ ಸಭೆಗೆ ಬಂದರು. ಆ ಹಾವು ಯಾವುದೋ ಬಲೆಯಲ್ಲಿ ಸಿಕ್ಕಿಬಿದ್ದಿತ್ತಂತೆ. ದಾರಿಯಲ್ಲಿ ಹೋಗುತ್ತಿದ್ದ ಆ ಮನುಷ್ಯ ನನ್ನು ಕಂಡು ತನ್ನನ್ನು ಬಿಡಿಸಬೇಕೆಂದು ಬೇಡಿಕೊಂಡಿತಂತೆ. ಅದು ತನ್ನನ್ನು ಕಚ್ಚುವುದಿಲ್ಲವೆಂದು ಆ ಮನುಷ್ಯನು ಅದರಿಂದ ಮಾತು ತೆಗೆದು

ಕೊಂಡು, ಅದನ್ನು ಬಲೆಯಿಂದ ಬಿಡಿಸಿದನು. ಬಿಡಿಸಿದೊಡನೆ ಹಾವು ಅವನನ್ನು ಕಚ್ಚಲು ಬಂದಿತು. 'ಕಚ್ಚುವುದು ಹಾವುಗಳ ಸ್ವಭಾವ' ಎಂದಿತು. ಕಡೆಗೆ ಆ ಮನುಷ್ಯನು 'ಬೇರೆ ಯಾರನ್ನಾದರೂ ಕೇಳೋಣ. ಅವರು ಕಚ್ಚಬಹುದೆಂದರೆ ನೀನು ಕಚ್ಚು' ಎಂದನು. ಹಾವೂ ಅದಕ್ಕೆ ಒಪ್ಪಿತು. ಆಗ ದಾರಿಯಲ್ಲಿ ಬಂದ ಒಂದು ಕಾಗೆಯನ್ನು ಕೇಳಲು, ಅದು 'ಹಾವು ಮನುಷ್ಯನನ್ನು ಕಚ್ಚುವುದೇ ನ್ಯಾಯ'ವೆಂದಿತು. ಮನುಷ್ಯನು ಸತ್ತರೆ ತಾನು ಅವನ ಕಣ್ಣುಗಳನ್ನು ಕಿತ್ತು ತಿನ್ನಬಹುದೆಂದು ಕಾಗೆ ಆಸೆಪಡುತ್ತಿತ್ತು. ಅದೇ ದಾರಿಯಲ್ಲಿ ಬರುತ್ತಿದ್ದ ಈ ತೋಳವೂ ಈ ಕರಡಿಯೂ 'ಹಾವು ಮನುಷ್ಯನನ್ನು ಕಚ್ಚುವುದೇ ನ್ಯಾಯ'ವೆಂದುವು. ಕಡೆಗೆ ಅವರಿಬ್ಬರೂ ಈ ಸಭೆಯ ಮುಂದೆ ಬಂದರು. ಅವರ ನ್ಯಾಯವನ್ನು ತೀರಿಸಿಕೊಡಬೇಕೆಂದು ಮಹಾಸ್ವಾಮಿಯವರು ನನಗೆ ಆಜ್ಞೆಮಾಡಿದಿರಿ. ನನಗೆ ಕೂಡ ಅದು ಸುಲಭವಾದ ಕಾರ್ಯವಾಗಿರಲಿಲ್ಲ. ಕಚ್ಚುವುದೇನೋ ಹಾವಿನ ಧರ್ಮವಾದರೂ ಉಪಕಾರಮಾಡಿದವನನ್ನು ಕಚ್ಚಬಹುದೇ ಎಂಬುದು ನನಗೂ ದೊಡ್ಡ ಸಮಸ್ಯೆಯಾಗಿಬಿಟ್ಟಿತ್ತು. ಆಗ, ಹಾವು ಮೊದಲು ಯಾವ ಸ್ಥಿತಿಯಲ್ಲಿತ್ತೋ ನೋಡಬೇಕೆಂದು ಹೇಳಿ, ಅದನ್ನು ಬಿಲದಲ್ಲಿ ಸೇರಿಸಿದೆ. ಅನಂತರ ಆ ಮನುಷ್ಯನನ್ನು ಕುರಿತು, 'ಹಾವು ಮನುಷ್ಯನನ್ನು ಕಚ್ಚುವುದೇನೋ ನ್ಯಾಯವೆ. ಬೇಕಾದರೆ ನೀನು ಹಾವನ್ನು ಪುನಃ ಬಿಡಿಸಬಹುದು' ಎಂದೆ. ಆಗ ಅವನು ನನ್ನ ತೀರ್ಪನ್ನು ಹೊಗಳುತ್ತಾ ಹೋದನು. ತಾವೂ ನನ್ನ ತೀರ್ಪನ್ನು ಬಹಳವಾಗಿ ಹೊಗಳಿದಿರಿ" ಎಂದು ರಾಯನರಿಯೆಂದಿತು.

ಅದಕ್ಕೆ ಸಿಂಹವು "ಅದಿರಲಿ. ಅದೆಲ್ಲಾ ಹಿಂದಿನ ಮಾತಾಯಿತು. ನೀನು ಈ ದಿನ ಈ ಕಾಗೆಯ ಹೆಂಡತಿಯನ್ನು ಏಕೆ ಸಾಯಿಸಿದೆ?" ಎಂದು ಕೇಳಿತು.

ಅದಕ್ಕೆ ರಾಯನರಿ "ಮಹಾಸ್ವಾಮಿ, ಆ ವಿಷಯವನ್ನು ಕುರಿತು ಮಾತನಾಡುವುದಕ್ಕಾಗಿಯೇ ನಾನು ಇಲ್ಲಿಗೆ ಬಂದದ್ದು. ನನ್ನ ಮೇಲೆ ಈ ಆರೋಪಣೆ ಬಂದಿದೆಯೆಂದು ತಿಳಿದ ಒಡನೆಯೇ ನಾನು ಇಲ್ಲಿಗೆ ಓಡಿ ಬಂದಿದ್ದೇನೆ. ಹೋದದಿನ ಬೆಳಗ್ಗೆ ಈ ಕಾಗೆ ಪೆಚ್ಚುಮೋರೆ ಹಾಕಿಕೊಂಡು

ನನ್ನ ಮನೆಗೆ ಬಂದಿತ್ತು. 'ಏಕೆ ದುಃಖಪಡುತ್ತಿರುವೆ?' ಎಂದು ನಾನು ಕೇಳಿದುದಕ್ಕೆ 'ನನ್ನ ಹೆಂಡತಿ ಸತ್ತುಹೋದಳು' ಎಂದಿತು. 'ಅವಳಿಗೆ ಏನಾಗಿತ್ತು?' ಎಂದು ಕೇಳಿದೆ. ಅದಕ್ಕೆ ಈ ಕಾಗೆ 'ಒಂದು ಹಳಸಿದ ಹೆಗ್ಗಣ ತಿಂದದ್ದು ಮೈಗಾಗದೆ ಸತ್ತುಹೋದಳು' ಎಂದಿತು. ಈಗ ಯಾರ ಮಾತನ್ನೋ ಕೇಳಿಕೊಂಡು, ನಾನು ಅವಳನ್ನು ಕೊಂದೆನೆಂದು ಸುಳ್ಳು ಹೇಳುತ್ತಿದೆ. ನಾನೇನಾದರೂ ಹಾಗೆ ಅದನ್ನು ಕೊಂದಿದ್ದಿದ್ದರೆ ನಾನಾಗಿಯೇ ಸನ್ನಿಧಿಗೆ ಬಂದು ಮುಖತೋರಿಸುತ್ತಿದ್ದೆನೇ ಎಂಬುದನ್ನು ತಾವು ಪರ್ಯಾಲೋಚಿಸಬೇಕು" ಎಂದಿತು.

ಸಿಂಹ ಪರ್ಯಾಲೋಚಿಸಿತು. ಏನು ಉತ್ತರ ಹೇಳುವುದಕ್ಕೂ ಅದಕ್ಕೆ ತೋಚಲಿಲ್ಲ. ಕಡೆಗೆ, "ಅದೆಲ್ಲಾ ಸರಿಯೆ. ಆದರೆ ಮೊಲದ ತಲೆಯನ್ನು ಟಗರಿನ ಕೈಯಲ್ಲಿ ಕಳುಹಿಸಿದೆಯಲ್ಲ. ಮೊಲವನ್ನು ಏಕೆ ಕೊಂದೆ?" ಎಂದು ಗರ್ಜಿಸಿತು.

ನರಿಯ ಮುಖ ಒಂದು ಗಳಿಗೆ ಮಂಕಾಯಿತು. ಅದರ ಮುಖದಲ್ಲಿ ಕಂಡುಬಂದ ತೀವ್ರವಾದ ದುಃಖವನ್ನು ಕಂಡು ಕಾಡಿನ ಪ್ರಾಣಿಗಳೆಲ್ಲಾ 'ಅಯ್ಯೋ ಪಾಪ' ಎಂದವು. ಸಿಂಹ ಕೂಡ ನರಿಯ ಮುಖದ ದುಃಖವನ್ನು ನೋಡಲಾರದೆ ಬೇರೆ ಕಡೆ ತಿರುಗಿಕೊಂಡಿತು.

ಆಗ, ಅಲ್ಲಿ ನೆರೆದಿದ್ದವರ ಮೇಲೆ ತನ್ನ ನಟನೆ ಹೇಗೆ ಪರಿಣಾಮವಾಯಿತೆಂಬುದನ್ನು ಕಂಡು, ರಾಯನರಿ "ಮಹಾಸ್ವಾಮಿ, ಏನು ಹೇಳಿದಿರಿ? ಟಗರು ಮೊಲದ ತಲೆ ತಂದಿತೆ? ಅಯ್ಯೋ, ಮುದ್ದು ಮೊಲವೆ? ನಿನಗೆ ಈ ದುರ್ಮರಣ ಪ್ರಾಪ್ತಿಯಾಯಿತೆ? ಮಹಾಸ್ವಾಮಿ, ಆ ಟಗರನ್ನು ಇಲ್ಲಿ ಕರೆಯಿಸಿರಿ? ನಾನು ಮೂರು ಮಹಾವಸ್ತುಗಳನ್ನು ಒಂದು ಚೀಲದಲ್ಲಿಟ್ಟು ಅದರ ಕೈಯಲ್ಲಿ ಕಳುಹಿಸಿದೆ. ಅದನ್ನು ಅದು ಏನು ಮಾಡಿತೆಂದು ಕೇಳೋಣ" ಎಂದಿತು.

ಅದಕ್ಕೆ ಸಿಂಹ "ಟಗರಿನ ಕೈಯಲ್ಲಿ ಮೂರು ಮಹಾವಸ್ತುಗಳನ್ನು ಕಳುಹಿಸಿದೆಯ? ತಾನು ತಂದ ಚೀಲದಲ್ಲಿ ತಾನೇ ಬರೆದ ಒಂದು ಪತ್ರವಿದೆಯೆಂದು ಟಗರು ಹೇಳಿತು. ಆದರೆ ಪತ್ರದ ಬದಲು ಮೊಲದ ತಲೆ

ಯಿದ್ದುದರಿಂದ, ನಿನ್ನೊಡನೆ ಟಗರೂ ಸೇರಿ ಮೊಲವನ್ನು ಕೊಂದಿರ ಬೇಕೆಂದು ನಾನು ಟಗರಿನ ತಲೆ ಕಡಿಯಿಸಿಬಿಟ್ಟೆ" ಎಂದಿತು.

ಆ ಮಾತು ಕೇಳಿ, ರಾಯನರಿ ಒಂದು ದೊಡ್ಡ ನಿಟ್ಟುಸಿರು ಬಿಟ್ಟು, "ಅಯ್ಯೋ, ಟಗರೂ ಸತ್ತುಹೋಯಿತೇ! ಎಂತಹ ಅಪಾರವಾದ ನಷ್ಟ ವಾಯಿತು! ಮಹಾಸ್ವಾಮಿಯವರಿಗಾಗಿ ನಾನು ಕಳುಹಿಸಿದ ಆ ಮೂರು ಮಹಾವಸ್ತುಗಳನ್ನು ಇನ್ನೆಲ್ಲಿ ಹುಡುಕುವುದು? ಆ ಮೂರರಲ್ಲಿ ಒಂದು, ಅಚ್ಚಚಿನ್ನದ ಉಂಗುರ. ಅದರ ಒಳಗಡೆಯಲ್ಲಿ ಮೂರು ಹೆಸರು ಕೆತ್ತಿತ್ತು. ಅದನ್ನು ಹಾಕಿಕೊಂಡವರಿಗೆ ಯಾವ ಯುದ್ಧದಲ್ಲಿಯೂ ಸೋಲಾಗುತ್ತಿರ ಲಿಲ್ಲ, ಯಾರಿಂದಲೂ ಪ್ರಾಣಹಾನಿಯಾಗುತ್ತಿರಲಿಲ್ಲ. ಎರಡನೆಯದು, ಒಂದು ಚಿನ್ನದ ಬಾಚಣಿಗೆ. ಅದರ ಪ್ರತಿಯೊಂದು ಹಲ್ಲಿನ ಮೇಲೆಯೂ ರಾಮಾಯಣ ಭಾರತದ ಕಥಾಭಾಗಗಳನ್ನು ಕೆತ್ತಿದ್ದರು. ಅಂತಹ ಬಾಚಣಿಗೆ ಲೋಕದಲ್ಲಿ ಬೇರೊಂದು ಇಲ್ಲ. ನಾನು ಕಳುಹಿಸಿದ ಮೂರ ನೆಯ ಮಹಾವಸ್ತುವೆಂದರೆ, ಒಂದು ಚಿನ್ನದ ಕನ್ನಡಿ. ಲೋಕದಲ್ಲಿ ನಡೆ ಯುವ ಯಾವ ಸಂಗತಿಯನ್ನಾದರೂ ಅದರೊಳಗೆ ಕಾಣಬಹುದಾಗಿತ್ತು. ಇಂತಹ ಅಮೂಲ್ಯವಾದ ಮೂರು ಮಹಾವಸ್ತುಗಳನ್ನು ಹುಡುಕಿ ತಂದು ತಮಗೆ ಒಪ್ಪಿಸುವ ವರೆಗೂ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಪಾಪ, ಅನ್ಯಾಯವಾಗಿ ಸತ್ತುಹೋದ ಮೊಲವನ್ನು ಪುನಃ ಬದುಕಿಸುವುದು ಮೃಗಮಾತ್ರವಾದ ನನ್ನಿಂದ ಸಾಧ್ಯವಿಲ್ಲ. ಆದರೂ ಮಹಾಸ್ವಾಮಿ ಯವರಿಗೆಂದು ಕೊಟ್ಟುಕಳುಹಿಸಿದ ಒಡವೆಗಳನ್ನು ಹುಡುಕಿ ತಂದು ಮಹಾಸ್ವಾಮಿಯವರಿಗೆ ಒಪ್ಪಿಸುವುದಕ್ಕೆ ನಾನು ನನ್ನ ಜೀವವನ್ನಾದರೂ ಕೊಟ್ಟೇನು" ಎಂದಿತು.

ನರಿ ಆಡಿದ ಆ ಮಾತಿಗೆ ಕಾಡಿನ ಮೃಗಗಳೆಲ್ಲ ಮೆಚ್ಚಿಕೊಂಡವು. ಸಿಂಹವೂ ಮೆಚ್ಚಿಕೊಂಡು, "ನಿನ್ನ ಮಾತು ನನಗೆ ಮಂದಟ್ಟಾಯಿತು, ರಾಯನರಿ. ನಿನ್ನಂತಹ ರಾಜಭಕ್ತನನ್ನು ಪಡೆದಿರುವ ನಾನೇ ಧನ್ಯ. ನಿನ್ನನ್ನು, ಇದೊ, ಬಿಡುಗಡೆ ಮಾಡಿರುತ್ತೇನೆ. ನೀನು ಹೋಗಿ, ಆ ಮೂರು ಮಹಾವಸ್ತುಗಳನ್ನು ಹುಡುಕಿ ತಂದು ನಮಗೆ ಒಪ್ಪಿಸಲು ನಾನು ನಿನಗೆ ಅಪ್ಪಣೆಕೊಡುತ್ತೇನೆ" ಎಂದಿತು.

೧೧

ನರಿಯ ನಯವಾದ ಮಾತುಗಳಿಗೆ ಸಿಂಹ ಪುನಃ ಮರುಳಾದುದನ್ನು ಕಂಡು, ತೋಳ ತಿರುಗಿ ಪ್ರತಿಭಟಿಸಿತು. "ಮಹಾಸ್ವಾಮಿ, ಈ ರಾಯನರಿಯ ಮಾತನ್ನು ಎಷ್ಟು ಸಲ ನಂಬುವುದು? ಎಷ್ಟು ಸಲ ಇದರ ಮೋಸವನ್ನು ಸಹಿಸುವುದು? ಈ ರಾಯನರಿಯ ಅನೇಕ ಅನ್ಯಾಯಗಳಲ್ಲಿ, ಇದುವರೆಗೆ ತಮ್ಮ ಕಿವಿಗೆ ಬೀಳದಿರುವ ಒಂದನ್ನು ತಿಳಿಸುತ್ತೇನೆ, ಲಾಲಿಸಬೇಕು. ಒಂದು ಸಲ ನಾನೂ ಈ ನರಿಯೂ ಕಾಡಿನಲ್ಲಿ ಒಟ್ಟಿಗೆ ಹೋಗುತ್ತಿದ್ದೆವು. ದೂರದಲ್ಲಿ ಒಂದು ಕಾಡುಕುದುರೆ ತನ್ನ ಮರಿಯೊಡನೆ ನಿಂತಿತ್ತು. ನನಗೆ ಆಗ ಬಹಳ ಹಸಿವಾಗುತ್ತಿತ್ತು. ಆ ಕಾಡುಕುದುರೆಯ ಮರಿಯನ್ನು ಕೊಂಡುಕೊಂಡು ತಿನ್ನಬೇಕೆಂದು ಆಸೆಯಾಯಿತು. ಅದರ ಬೆಲೆಯನ್ನು ಕೇಳಿ ತಿಳಿದುಕೊಂಡು ಬರುವಂತೆ ಈ ನರಿಯನ್ನು ಕಳುಹಿಸಿದೆ. ಈ ನರಿ ಹೋಗಿ ಆ ಕಾಡುಕುದುರೆಯ ಹತ್ತಿರ ಏನೇನೋ ಮಾತನಾಡಿಕೊಂಡು ಬಂದು, 'ಕಾಡುಕುದುರೆ ತನ್ನ ಮರಿಯನ್ನು ಮಾರಿಬಿಡುತ್ತದಂತೆ. ಬೆಲೆ ದೊಡ್ಡಕುದುರೆಯ ಹಿಂಗಾಲಿನಲ್ಲಿ ಬರೆದಿದೆಯಂತೆ' ಎಂದಿತು. ನಾನು ಬೆಲೆಯೆಷ್ಟೋ ತಿಳಿಯೋಣವೆಂದು ದೊಡ್ಡಕುದುರೆಯ ಹಿಂಗಾಲಿನ ಹತ್ತಿರ ಹೋದಾಗ, ಕುದುರೆ ನನ್ನನ್ನು ಬಲವಾಗಿ ಒದ್ದುಬಿಟ್ಟಿತು. ನಾನು ಅಲ್ಲಿಯೇ ಮೂರ್ಛೆ ಬಿದ್ದುಬಿಟ್ಟೆ. ಆಗ ಈ ನರಿ ಬಂದು 'ಏನು ತೋಳ? ಮರಿಯ ಬೆಲೆಯನ್ನು ಪದ್ಯದಲ್ಲಿ ಬರೆದಿದ್ದರೋ? ಗದ್ಯದಲ್ಲಿ ಬರೆದಿದ್ದರೋ?' ಎಂದು ಅಣಕಿಸಿತು" ಎಂದಿತು.

"ಅದಕ್ಕೆ ನಾನೇನು ಮಾಡಲಿ, ಮಹಾಪ್ರಭು? ಕಾಡುಕುದುರೆ ಹೇಳಿದ ಮಾತನ್ನು ನಿಜವೆಂದೇ ನಂಬಿ ನಾನು ತೋಳಕ್ಕೆ ತಿಳಿಸಿದೆ. ಅದು ಒದೆಯುವುದೆಂದು ನಾನೇನು ಕನಸು ಕಂಡಿದ್ದೆನೆ?" ಎಂದು ರಾಯನರಿ ಹೇಳಿತು.

ಅದಕ್ಕೆ ತೋಳ ಪುನಃ "ಅದೂ ಹೋಗಲಿ. ನನ್ನ ಹೆಂಡತಿಗೆ ಮೀನು ಹಿಡಿಯುವುದು ಕಲಿಸುತ್ತೇನೆಂದು ನೀನು ಕರೆದುಕೊಂಡು

ಹೋದುದನ್ನು ನಾನು ಇನ್ನೂ ಮರೆತಿಲ್ಲ. ಮಹಾಸ್ವಾಮಿ, ಚಳಿಗಾಲದಲ್ಲಿ ಒಂದು ಬೆಳಗಿನ ಜಾವ ಈ ನರಿ ಮೀನು ಹಿಡಿಯುವುದು ಕಲಿಸುತ್ತೇನೆಂದು ನನ್ನ ಹೆಂಡತಿಯನ್ನು ಕರೆದುಕೊಂಡುಹೋಯಿತು. ಪಾಪ, ಅವಳೂ ಇದರ ಮಾತು ನಂಬಿಕೊಂಡು ಹೋದಳು. ನರಿ ಅವಳನ್ನು ಮಧ್ಯಾಹ್ನದ ವರೆಗೂ ಚಳಿನೀರಿನಲ್ಲಿ ನಿಲ್ಲಿಸಿಬಿಟ್ಟು, ಮೂರು ತಿಂಗಳ ಕಾಲ ಅವಳಿಗೆ ನೆಗಡಿ ಬರುವಂತೆ ಮಾಡಿತ್ತು'' ಎಂದಿತು.

ರಾಯನರಿ ಅದಕ್ಕೂ ಉತ್ತರ ಹೇಳಬೇಕೆಂದು ಎದ್ದಿತು. ಆದರೆ ಅಷ್ಟರಲ್ಲೇ ತೋಳದ ಹೆಂಡತಿ ಮುಂದೆ ಬಂದು, ''ಸುಮ್ಮನೆ ಬಾಯಿ ಬಡಿಯಬೇಡ, ರಾಯನರಿ. ನೀನು ಮಾಡಿದ ಇನ್ನೊಂದು ಅನ್ಯಾಯ ವನ್ನು ನಾನು ಹೇಳುತ್ತೇನೆ. ಆ ದಿವಸ ಬಾವಿಯ ಬಳಿ ನಡೆದುದನ್ನು ಮರೆತುಬಿಟ್ಟೆಯೇನು? ಬಾವಿಯ ರಾಟೆಯಮೇಲೆ ಒಂದು ಹಗ್ಗವಿತ್ತು, ಆ ಹಗ್ಗದ ಎರಡು ಕೊನೆಗೂ ಎರಡು ಬಾನಿ ಕಟ್ಟಿತ್ತು. ಒಂದು ಬಾನಿ ಕೆಳಗೆ ಹೋದರೆ, ಇನ್ನೊಂದು ಮೇಲೆ ಬರುತ್ತಿತ್ತು. ಆ ದಿವಸ ನಾನು ಅಲ್ಲಿ ಬಂದಾಗ ನೀನು ಕೆಳಗಿನ ಬಾನಿಯಲ್ಲಿ ಕುಳಿತು ನರಳುತ್ತಿದ್ದೆ. ನನ್ನನ್ನು ಕಂಡು 'ಕೆಳಗಡೆ ಮೀನು ಹಿಡಿದು ತಿನ್ನುತ್ತಿದ್ದೇನೆ' ಎಂದೆ. 'ನಾನೂ ಬರಲೆ?' ಎಂದು ನಾನು ಕೇಳಿದಾಗ, 'ಮೇಲಿನ ಬಾನಿಗೆ ದುಮುಕು' ಎಂದು ನೀನು ಹೇಳಿದೆ. ನಿನ್ನ ಮಾತು ನಂಬಿಕೊಂಡು ನಾನೂ ಮೇಲಿನ ಬಾನಿಗೆ ದುಮುಕಿದೆ. ನಾನು ನಿನಗಿಂತ ಹೆಚ್ಚು ಭಾರವಾದ್ದರಿಂದ ನಾನು ಕುಳಿತಿದ್ದ ಬಾನಿ ಕೆಳಗೆ ಇಳಿಯಿತು, ನೀನು ಕುಳಿತಿದ್ದ ಬಾನಿ ಮೇಲೆ ಬಂದಿತು. ಆಗ ನೀನು ಆ ಬಾನಿಯಿಂದ ಹಾರಿ ಓಡಿಹೋದೆ. ನಾನು ಎರಡು ದಿವಸ ಆ ಬಾವಿಯಲ್ಲಿಯೇ ಇರಬೇಕಾಯಿತು'' ಎಂದಿತು.

ಆಮೇಲೆ ತೋಳ ನರಿಯನ್ನು ಕುರಿತು ''ನೀನು ನಮಗೆ ಅನೇಕ ಸಲ ಮೋಸಮಾಡಿದ್ದೀಯೆ. ನಮ್ಮನ್ನು ಅನೇಕ ಸಲ ಅಣಕಿಸಿದ್ದೀಯೆ. ನಮಗೂ ನಿನ್ನ ಪೀಡೆಯನ್ನು ಸಹಿಸಿ ಸಹಿಸಿ ಸಾಕಾಗಿದೆ. ಇನ್ನುಮುಂದೆ ನಮ್ಮಿಬ್ಬರಲ್ಲಿ ಯಾರಾದರೂ ಒಬ್ಬರು ಮಾತ್ರ ಬದುಕಿರಬೇಕು. ನಿನ್ನಂ ತಹ ಕಪಟಿಯೂ ವಿಶ್ವಾಸಘಾತಕನೂ ಬೇರೊಬ್ಬನಿಲ್ಲವೆಂದು ಜಗತ್ತಿಗೆ

ತೋರಿಸುವುದಕ್ಕಾಗಿ ನಾನು ನಿನ್ನೊಡನೆ ನಾಳೆ ರಾಜನ ಎದುರಿಗೆ ಮಲ್ಲಯುದ್ಧಮಾಡಲು ಸಿದ್ಧನಾಗಿದ್ದೇನೆ. ನ್ಯಾಯವು ನಿನ್ನ ಕಡೆ ಇದೆ ಯೆಂಬ ಧೈರ್ಯ ನಿನಗೆ ಇದ್ದರೆ ನಾಳೆ ಮಲ್ಲಯುದ್ಧಕ್ಕೆ ಒಪ್ಪಿಕೊ'' ಎಂದು ಮಲ್ಲಯುದ್ಧಕ್ಕೆ ಕರೆಯಿತು.

ನರಿಯೂ ಹಾಗೆಯೆ ಆಗಲೆಂದು ಒಪ್ಪಿತು. ಮಾರನೆಯ ದಿವಸ ಸಿಂಹದ ಎದುರಿಗೆ ತೋಳನಿಗೂ ರಾಯನರಿಗೂ ಮಲ್ಲಯುದ್ಧವಾಗ ಬೇಕೆಂದು ನಿಶ್ಚಯವಾಯಿತು.

೧೨

ರಾಯನರಿ ಅದೇ ರಾತ್ರಿ ಹೋಗಿ ತನ್ನ ಮೈಮೇಲಿನ ಕೂದಲ ನ್ನೆಲ್ಲಾ ನುಣ್ಣಗೆ ಬೋಳಿಸಿಬಿಟ್ಟಿತು. ಮಾರನೆಯ ಬೆಳಗ್ಗೆ ಮೈಗೆಲ್ಲಾ ಚೆನ್ನಾಗಿ ಎಣ್ಣೆ ಬಳಿದುಕೊಂಡು ಮಲ್ಲಯುದ್ಧಕ್ಕೆ ಸಿದ್ಧವಾಗಿ ಬಂದು ನಿಂತುಕೊಂಡಿತು. ಮಲ್ಲಯುದ್ಧ ಮೊದಲಾಯಿತು.

ತೋಳ ನರಿಯನ್ನು ಹಿಡಿಯಬೇಕೆಂದಾಗಲೆಲ್ಲಾ ನರಿ ಅದರ ಹಿಡಿತದಿಂದ ನುಣಿಚಿಕೊಳ್ಳುತ್ತಿತ್ತು. ನರಿಯ ಬಾಲವನ್ನು ಹಿಡಿಯ ಬೇಕೆಂದು ತೋಳ ಕೈ ಚಾಚಿದರೆ, ನರಿ ತನ್ನ ಬಾಲವನ್ನು ಹಿಂಗಾಲುಗಳ ಮಧ್ಯೆ ಸಿಕ್ಕಿಸಿಕೊಂಡು ಅಖಾಡದ ಸುತ್ತಲೂ ಓಡುತ್ತಿತ್ತು. ತೋಳ ತನ್ನ ಬೆನ್ನಟ್ಟಿಬಂದರೆ, ನರಿ ತನ್ನ ಹಿಂಗಾಲುಗಳಿಂದ ದೂಳು ಎಬ್ಬಿಸಿಬಿಡು ತ್ತಿತ್ತು. ತೋಳದ ಕಣ್ಣುತುಂಬ ದೂಳು ತುಂಬಿಕೊಂಡುಬಿಡುತ್ತಿತ್ತು. ತೋಳ ಕಣ್ಣುಜ್ಜಿಕೊಳ್ಳಲು ನಿಂತಾಗ, ನರಿ ಅದರ ತಲೆಯ ಮೇಲೆ ಪಟಪಟಪಟಪಟಯೆಂದು ಕುಟ್ಟಿಬಿಡುತ್ತಿತ್ತು. ತೋಳ ಪುನಃ ನರಿಯನ್ನು ಅಟ್ಟಿಸಿಕೊಂಡುಹೋಗುತ್ತಿತ್ತು.

ಹೀಗೆಯೇ ಬಹಳ ಹೊತ್ತು ನಡೆಯಿತು. ಕಡೆಗೆ ತೋಳದ ಸಿಟ್ಟು ಮಿತಿಮೀರಿತು. ತೋಳ ಸಮಯ ನೋಡಿಕೊಂಡಿದ್ದು ರಾಯನರಿಗೆ ಒಂದು ಬಲವಾಗಿ ಅಪ್ಪಳಿಸಿತು. ರಾಯನರಿಗೂ ಆ ಏಟು ತಡೆಯಲಾಗ ಲಿಲ್ಲ. ಅದು ದೊಪ್ಪನೆ ಕೆಳಗೆ ಬಿದ್ದುಬಿಟ್ಟಿತು. ತೋಳ, ಅದು ಏಳ ಲಾಗದಂತೆ ಅದರ ಮೇಲೆ ಮಲಗಿಕೊಂಡುಬಿಟ್ಟಿತು.

ಕೊಂಚಹೊತ್ತಿನಲ್ಲಿಯೇ ರಾಯನರಿಗೆ ಮೂರ್ಛೆ ತಿಳಿಯಿತು. ತನ್ನ ಮೇಲೆ ತೋಳ ಕುಳಿತುಬಿಟ್ಟಿದ್ದುದನ್ನು ಅದು ಕಂಡಿತು. ಹೇಗಾದರೂ ಉಪಾಯದಿಂದ ತಪ್ಪಿಸಿಕೊಳ್ಳಬೇಕೆಂದು "ಅಯ್ಯಾ, ನಾನೂ ನೀನೂ ಬಹಳ ವರ್ಷಗಳಿಂದ ಸ್ನೇಹಿತರಲ್ಲವೆ? ಇನ್ನುಮುಂದೆಯೂ ಹಾಗೆಯೆ ಇರೋಣ. ಈಯೊಂದು ಸಲ ನನ್ನನ್ನು ಕ್ಷಮಿಸಿಬಿಡು. ಇನ್ನುಮುಂದೆ ನಾನು ಏನು ಕದ್ದುತಂದರೂ ನಿನಗೆ ಮೊದಲು ಅರ್ಧ ಒಪ್ಪಿಸುತ್ತೇನೆ. ನಿನ್ನ ಮನೆಯಲ್ಲಿ ಮುಸುರೆ ತಿಕ್ಕುವುದಕ್ಕೆ ನನ್ನ ಹೆಂಡತಿಯನ್ನು ಕಳಿಸುತ್ತೇನೆ. ನನ್ನ ಮಕ್ಕಳು ಬಂದು ನಿನ್ನ ಮನೆಯಲ್ಲಿ ಕಸ ಗುಡಿಸುತ್ತಾರೆ. ನಾನು ನಿನ್ನ ಮನೆಗೆ ನೀರು ಹೊತ್ತುಹಾಕುತ್ತೇನೆ. ಈಯೊಂದು ಸಲ ನನ್ನನ್ನು ಕ್ಷಮಿಸು" ಎಂದು ಬೇಡಿಕೊಂಡಿತು.

ನರಿಯನ್ನು ಮೆಟ್ಟಿಬಿಟ್ಟೆನೆಂದು ತೋಳ ಹೆಮ್ಮೆಯಿಂದ ಕೊಂಚ ಕೊಂಚವಾಗಿ ಮೈಮರೆಯುತ್ತಿತ್ತು. ಅದನ್ನೇ ಕಾಯುತ್ತಿದ್ದ ರಾಯನರಿ ತಟಕ್ಕನೆ ತಿರುಗಿ ಅದರ ಕತ್ತಿನಬಳಿ ಕಚ್ಚಿಹಿಡಿದು, ಅಖಾಡದ ಸುತ್ತಲೂ ಅದನ್ನು ಎಳೆದೂ ಎಳೆದೂ ಸಾಯಿಸಿಬಿಟ್ಟಿತು.

ಮಲ್ಲಯುದ್ಧದಲ್ಲಿ ರಾಯನರಿಯೇ ಗೆದ್ದುಬಂದಿತು.

೧೩

ದೇಹಬಲದಲ್ಲಿ ಅಷ್ಟು ದೊಡ್ಡದಲ್ಲದಿದ್ದರೂ ತನ್ನ ಬುದ್ಧಿಬಲದಿಂದ ರಾಯನರಿ ಗೆದ್ದುಬಂದುದನ್ನು ಗಮನಿಸಿ, ಮೃಗರಾಜನಾದ ಸಿಂಹವು, ಅದನ್ನು ಮನ್ನಿಸಿ ತನ್ನ ಮಂತ್ರಿಯನ್ನಾಗಿ ಮಾಡಿಕೊಂಡಿತು. ಅಂದಿನಿಂದ ರಾಯನರಿಯ ಮೇಲೆ ದೂರು ತರುವ ಧೈರ್ಯ ಯಾವ ಪ್ರಾಣಿಗೂ ಉಂಟಾಗಲಿಲ್ಲ. ರಾಯನರಿ ಕಾಡಿನ ರಾಯನಿಗಿಂತ ತಾನೇ ಒಂದು ಕೈ ಮೇಲಾಗಿ ತನ್ನ ಹೆಂಡತಿ ಮಕ್ಕಳೊಡನೆ ಸುಖವಾಗಿ ಇತ್ತು.